ಸ್ವಾಮೀ ವಿವೇಕಾನಂದರ

# ಭಕ್ತಿಯೋಗ

ಕನ್ನಡಿಸಿದವರು:
ಗೊರೂರು ರಾಮಸ್ವಾಮಿ ಐಯಂಗಾರ್



ಮನೋಹರ ಗ್ರಂಥ ಭಾಂಡಾರ
ಧಾರವಾಡ

ಸ್ವಾಮಿ ವಿವೇಕಾನಂದರ

# ಭಕ್ತಿಯೋಗ

ಕನ್ನಡಿಸಿದವರು:

ಗೊರೂರ ರಾಮಸ್ವಾಮಿ ಐಯಂಗಾರ್

ಮನೋಹರ ಗ್ರಂಥ ಭಾಂಡಾರ

— ಧಾರವಾಡ —

## ಮುನ್ನುಡಿ

ಸ್ವಾಮಿ ವಿವೇಕಾನಂದರವರ ಭಕ್ತಿಯೋಗವನ್ನು ನಾನು, ಮೈಸೂರಿನ ರಾಮಕೃಷ್ಣ ಆಶ್ರಮದ ಸ್ವಾಮಿಗಳಾದ ಶ್ರೀಚಿನ್ಮಾತ್ರಾನಂದಜಿಯವರ ಬಲಾತ್ಕಾರಕ್ಕೆ ಒಳಗಾಗಿ ಅನುವಾದ ಮಾಡಲು ಪ್ರಾರಂಭಿಸಿದೆನು. ಸ್ವಾಮಿ ಚಿನ್ಮಾತ್ರಾನಂದಜಿಯವರು ಮೈಸೂರನ್ನು ಬಿಟ್ಟು ಬೇರೆ ಆಶ್ರಮಕ್ಕೆ ಹೊರಟು ಹೋದ ಮೇಲೆ ಅವರ ಪರವಾಗಿ ಬೆಂಗಳೂರಿನ ಶ್ರೀರಂಗನಾಥಾನಂದ ಸ್ವಾಮಿಗಳು, ನಾನು ಅನುವಾದವನ್ನು ಮುಂದುವರಿಸಿ ಮುಗಿಸಬೇಕೆಂದು ಹೇಳಿದರು: ಆ ವೇಳೆಗೆ ಪೂಜನೀಯ ಶ್ರೀ ವೈ. ಸುಬ್ಬರಾಯರ ಭಕ್ತಿಯೋಗವು ಪ್ರಕಟವಾಗಿದ್ದುದರಿಂದ ಇನ್ನೊಂದು ಅನುವಾದದ ಆವಶ್ಯಕತೆಯಿಲ್ಲವೆಂದು ನಾನು ಶ್ರೀರಂಗನಾಥಾನಂದ ಸ್ವಾಮಿಗಳಿಗೆ ತಿಳಿಸಿದೆ. ಅವರು "ಚಿಂತೆಯಿಲ್ಲ ನೀವು ಮಾಡಿ" ಎಂದು ಮತ್ತೆ ಬಲಾತ್ಕರಿಸಿದುದರಿಂದ ಪುಸ್ತಕ ಬರೆದು ಮುಗಿಸಿದೆ. ಅನಂತರ ಅದನ್ನು ಬೆಂಗಳೂರಿನ ಶ್ರೀ ರಾಮಕೃಷ್ಣ ಆಶ್ರಮಕ್ಕೆ ಕಳುಹಿಸಿ ಕೊಟ್ಟೆ. ಆ ವೇಳೆಗೆ ಅಲ್ಲಿಗೆ ಮತ್ತೊಬ್ಬರು ಹೊಸ ಸ್ವಾಮಿಗಳು ಬಂದಿದ್ದರು. ಕೆಲವು ಕಾಲ ಹಸ್ತಪ್ರತಿಯು ಆಶ್ರಮದಲ್ಲೇ ಇದ್ದ ಮೇಲೆ ಒಂದು ಸಲ "ಭಕ್ತಿಯೋಗವನ್ನು ಪ್ರಕಟಿಸುವಿರಾ" ಎಂದು ಬರೆದು ಕೇಳಿದೆ. ಕನ್ನಡದಲ್ಲಿ ವೇದಾಂತ ಗ್ರಂಥಗಳನ್ನು ಓದುವವರು ವಿರಳವಾದುದರಿಂದ ಪ್ರಕಟಿಸಲು ಧೈರ್ಯವಿಲ್ಲ. ನೀವು ಪ್ರಕಟಿಸಲು ನಮ್ಮ ಅಡ್ಡಿ ಇಲ್ಲ ಎಂದು ಬರೆದರು. ಹಸ್ತಪ್ರತಿಯನ್ನು ಮೂಲೆಗೆ ಹಾಕಿ ಶಾಂತವಾಗಿ ಕುಳಿತಿದ್ದೆ.

ನನ್ನ ಮಿತ್ರರಾದ ಶ್ರೀಮಾನ್ ಚುಳ್ಕಿಯವರು ನಾನು ಪ್ರಕಟಿಸುತ್ತೇನೆಂದು ಬಂದರು. ವೇದಾಂತ ಗ್ರಂಥಗಳನ್ನು ಓದುವವರು ಇಲ್ಲದುದರಿಂದ, ಆಶ್ರಮದವರು ಪ್ರಕಟಿಸಲು ಹಿಂದೆಗೆದುದನ್ನು ಶ್ರೀ ಚುಳ್ಕಿಯವರು ಪ್ರಕಟಿಸುವ ಸಾಹಸ ಮಾಡಿದುದರಿಂದ ಈ ಅನುವಾದವು ಬೆಳಕಿಗೆ ಬಂದಿದೆ. ಈ ಸಾಹಸಿಗಳಾದ ಪ್ರಕಾಶಕರಿಗೆ ಕನ್ನಡನಾಡು ಪ್ರೋತ್ಸಾಹ ಕೊಡುವುದೆಂದು ನಂಬುತ್ತೇನೆ.

ಗೊರೂರು<br>
ವಿಕ್ರಮ ಸಂ| ಆಶ್ವೀಜ ಶುದ್ಧ ಚತುರ್ದಶಿ<br>
೫—೧೦—೧೯೪೦

**ಗೊರೂರು ರಾಮಸ್ವಾಮಿ ಐಯಂಗಾರ್**

# ಪ್ರಕಾಶಕರ ಮನೀಷೆ

"ಸ್ವಾಮಿ ವಿವೇಕಾನಂದರ ಭಕ್ತಿಯೋಗ, ಮೈಸೂರು ಚಿನ್ಮಾತ್ರಾನಂದರವರ ಮಾತಿನಂತೆ ಕನ್ನಡಿಸಿದ್ದೆ. ಈಗ ಅವರು ಅಲ್ಲಿ ಇಲ್ಲ. ಅಚ್ಚು ಹಾಕುತ್ತೀರಾ?" ಎಂದು ನಮ್ಮ ಪ್ರಿಯ ಸ್ನೇಹಿತರಾದ ಗೊರೂರು ರಾಮಸ್ವಾಮಿ ಐಯಂಗಾರರವರು ವಿಚಾರಿಸಿದರು. ನಾವೂ ಅವರಿಗೆ ಅವರ ಕೃತಿಯೊಂದಕ್ಕಾಗಿ ಬಿನ್ನವಿಸಿಕೊಳ್ಳುತ್ತಲೇ ಇದ್ದೆವು. ಅದಕ್ಕಾಗಿ ಅವರು ಹೀಗೆ ನಮ್ಮನ್ನು ವಿಚಾರಿಸಿದುದು.

"ಸಮಗ್ರ ವಿವೇಕಾನಂದ" ಪ್ರಕಟಿಸುವ ಕುರಿತು ಅಂದೇ ಮತ್ತೊಬ್ಬ ಸ್ನೇಹಿತರೊಡನೆ ಚರ್ಚಿಸುತ್ತ ಕುಳಿತಾಗ ಶ್ರೀಮಾನ್ ಗೊರೂರು ಇವರ ಪತ್ರ ಬಂದಿತು. ನಮ್ಮ ಮನೀಷೆಯು ಕೃತಿರೂಪದಲ್ಲಿ ಬರಲು ಶುಭಯೋಗವಿದೆಯೆಂದು ಬಗೆದು ಈ 'ಭಕ್ತಿಯೋಗ' ದಿಂದ ಆರಂಭಿಸಿಯೇ ಬಿಡುವುದೆಂದು ಗೊತ್ತುಮಾಡಿದೆವು.

ಶ್ರೀ ಸ್ವಾಮಿ ವಿವೇಕಾನಂದರ ಈ 'ಭಕ್ತಿಯೋಗ' ವನ್ನು ಕನ್ನಡಿಸಿ, ಪ್ರಕಾಶನಗೊಳಿಸಲು ನಮಗೆ ದಯಪಾಲಿಸಿದ ಸ್ನೇಹಿತರಾದ ಗೊರೂರು ರಾಮಸ್ವಾಮಿ ಐಯಂಗಾರ ಇವರಿಗೆ ನಾವು ಎಂದಿಗೂ ಕೃತಜ್ಞರಾಗಿದ್ದೇವೆ.

ಮೊದಲೇ ಕನ್ನಡದ ಪುಸ್ತಕಗಳ ಮಾರಾಟವು ಹೆಚ್ಚಾಗಿ ನಡೆಯುತ್ತಿಲ್ಲ. ಅದರಲ್ಲಿ ವೇದಾಂತ ಗ್ರಂಥವೆಂದರೆ ತೀರಿಯೇ ಹೋಯಿತು. ಪ್ರಕಾಶಕರ ಅವಸ್ಥೆಯ ಬಗ್ಗೆ ವಿಚಾರಿಸುವದೇ ಬೇಡ ಎನ್ನುವಂಥ ಪರಿಸ್ಥಿತಿಯಲ್ಲಿ ನಾವು ಭಕ್ತಿಪೂರ್ವಕವಾಗಿ ಪ್ರಕಟಿಸುವ ಧೈರ್ಯಮಾಡಿದ್ದೇವೆ. ಈ "ಭಕ್ತಿಯೋಗ"ದ ಫಲಾಫಲವನ್ನರಿತು ಮುಂದಿನ ಪ್ರಕಟಣೆಗಳ ವಿಚಾರಮಾಡುವೆವು. ಕಾರಣ ಕನ್ನಡಾಭಿಮಾನಿಗಳು, ಗ್ರಂಥಾಭಿಲಾಷಿಗಳು, ವೇದಾಂತ ವಿಚಾರಪರರು ಇವರೇ ಮೊದಲಾದವರ ಪ್ರೋತ್ಸಾಹನವು ನಮ್ಮ ಮನೀಷೆಗೆ ಪರಿಪೋಷಕವಾಗುವದೆಂದು ನಂಬಿರುವ,

—ಪ್ರಕಾಶಕರು

ಮ. ಗ್ರ. ಭಾಂಡಾರ, ಧಾರವಾಡ

# ಭಕ್ತಿಯೋಗ

## ೧ ಭಕ್ತಿಯ ಲಕ್ಷಣಗಳು

ದೇವರನ್ನು ಶ್ರದ್ಧೆಯಿಂದಲೂ ಆಸಕ್ತಿಯಿಂದಲೂ ಹುಡುಕುವುದೇ ಭಕ್ತಿಯೋಗ. ಈ ಯೋಗವು ಪ್ರೇಮದಲ್ಲಿ ಪ್ರಾರಂಭವಾಗಿ ಪ್ರೇಮದಿಂದ ಮುಂದುವರಿದು ಪ್ರೇಮದಲ್ಲಿ ಕೊನೆಗೊಳ್ಳುತ್ತದೆ. ದೇವರನ್ನು ಅತಿಯಾಗಿ ಪ್ರೀತಿಸುವ ಒಂದು ಗಳಿಗೆಯ ಹುಚ್ಚು ನಮಗೆ ನಿತ್ಯವಾದ ಸ್ವಾತಂತ್ರ್ಯವನ್ನು ತರುತ್ತದೆ. ನಾರದ ಮಹರ್ಷಿಯು ಭಕ್ತಿಸೂತ್ರಗಳ ವ್ಯಾಖ್ಯಾನದಲ್ಲಿ, ಭಕ್ತಿಗೆ 'ದೇವರಲ್ಲಿ ಅತಿ ಪ್ರೇಮ' * ಎಂಬುದಾಗಿ ಅರ್ಥಮಾಡಿದ್ದಾನೆ. 'ಮನುಷ್ಯನಿಗೆ ಎಲ್ಲದರಲ್ಲಿಯೂ ಪ್ರೇಮವುಂಟಾಗಿ ಒಬ್ಬರಲ್ಲಿಯೂ ದ್ವೇಷವಿಲ್ಲದಿದ್ದರೆ ಅವನಿಗೆ ಶಾಂತಿ, ಸಮಾಧಾನಗಳು ಉಂಟಾಗುತ್ತವೆ' 'ಈ ಪ್ರೇಮವನ್ನು ಯಾವ ಪ್ರಾಪಂಚಿಕ ಲಾಭಕ್ಕೂ ಪರಿವರ್ತಿಸಿಕೊಳ್ಳುವಂತೆ ಇಲ್ಲ.' ಯಾಕೆಂದರೆ ಪ್ರಾಪಂಚಿಕ ಆಸೆಗಳು ಮನುಷ್ಯನಲ್ಲಿ ಇರುವವರೆಗೆ ಆ ವಿಧವಾದ ಸಾರ್ವಜನಿಕ ಪ್ರೇಮವು ಅವನಲ್ಲಿ ಉಂಟಾಗುವಂತೆಯೇ ಇಲ್ಲ. 'ಭಕ್ತಿಯು ಕರ್ಮ ಮತ್ತು ಯೋಗಗಳಿಗಿಂತ ಮಹತ್ತಾದುದು, ದೊಡ್ಡದಾದುದು. ಯಾಕೆಂದರೆ ಕರ್ಮ ಮತ್ತು ಯೋಗಗಳಿಗೆ ಗುರಿಯಾದ ಉದ್ದೇಶವು ಬೇರೆ ಇದೆ. ಆದರೆ ಭಕ್ತಿಗೆ ಅದೇ ಫಲ, ಅದೇ ಮಾರ್ಗ, ಅದೇ ಕೊನೆ.' ‡

---

* ಓಂ ಸಾ ತ್ವಸ್ಮಿನ್ ಪರಮಪ್ರೇಮ ರೂಪಾ (ನಾರದ ಸೂತ್ರ ೧–೨)

‡ ಓಂ ಸಾ ನಕಾಮಯಮಾನಾ ನಿರೋಧ ರೂಪಾತ್ (ನಾರದ ಸೂತ್ರ ೧೧–೭)
ಓಂ ಸಾ ತು ಕರ್ಮಜ್ಞಾನಯೋಗೇಭ್ಯೋಽಪ್ಯಧಿಕತರಾ
(ನಾರದ ಸೂತ್ರ ೪–೨೫)
ಓಂ ಸ್ವಯಂ ಫಲರೂಪತೇತಿ ಬ್ರಹ್ಮಕುಮಾರಾಃ (ನಾರದ ಸೂತ್ರ ೪–೩೦)

ನಮ್ಮ ಋಷಿಗಳು ಭಕ್ತಿಯನ್ನು ಕುರಿತು ಪದೆ ಪದೆ ಹೇಳಿದ್ದಾರೆ. ಭಕ್ತಿಯ ವಿಷಯವನ್ನೇ ಹೆಚ್ಚಾಗಿ ಹೇಳಿರುವ ಶಾಂಡಿಲ್ಯ ಮತ್ತು ನಾರದ ರಲ್ಲದೆ, ವ್ಯಾಸ ಸೂತ್ರದ ಜ್ಞಾನಿಗಳಾದ ವ್ಯಾಖ್ಯಾನಕಾರರೂ ಜ್ಞಾನ ಮಾರ್ಗದ ಪ್ರತಿಪಾದನೆಯನ್ನೇ ಮಾಡುವವರಾದರೂ ಪ್ರೇಮದ ವಿಷಯ ದಲ್ಲಿ ಬಹಳ ಪ್ರಾಮುಖ್ಯವಾದ ಕೆಲವು ಸೂಚನೆಗಳನ್ನು ಕೊಟ್ಟಿದ್ದಾರೆ. ಯಾಕೆಂದರೆ, ಸೂತ್ರಗಳಲ್ಲಿರುವ ಅನೇಕ ಅಥವ ಎಲ್ಲಾ ವಾಕ್ಯಗಳಿಗೂ, ಅವುಗಳ ಅರ್ಥವು ಬರಿಯ ಸ್ವಾರಸ್ಯವಿಲ್ಲದ ತಿಳುವಳಿಕೆ ಎಂಬುದಾಗಿ ವ್ಯಾಖ್ಯಾನಕಾರರು ಅರ್ಥಮಾಡಿದ್ದರೂ ಸೂತ್ರಗಳು ಅದರಲ್ಲೂ ಪೂಜೆಯ ಅಧ್ಯಾಯದಲ್ಲಿ ಆ ರೀತಿ ಮನಬಂದಂತೆ ತಮ್ಮನ್ನು ತಿರುಗಿಸಲು ಅವಕಾಶವನ್ನು ಕೊಟ್ಟಿಲ್ಲ.

ಜನರು ಕೆಲವು ವೇಳೆ ಊಹಿಸುವಂತೆ ಜ್ಞಾನಕ್ಕೂ ಭಕ್ತಿಗೂ ಅಷ್ಟು ದೊಡ್ಡ ನಿಜವಾದ ಅಂತರವಿಲ್ಲ. ಅವುಗಳೆರಡೂ ಒಂದೇಕಡೆ ಹೋಗಿ ಮಿಳನವಾಗುವುದೆಂಬುದನ್ನು ನಾವು ಮುಂದೆ ಕಾಣುತ್ತೇವೆ. ರಾಜಯೋಗವೂ ಕೂಡ–ಅಜ್ಞಾನಿಗಳಿಗೆ ಮೋಸಮಾಡಲು ಡಂಭಾಚಾರಿ ಗಳಾದ 'ಮಂತ್ರವಾದಿ' ಗಳ ಕೈಯಲ್ಲಿ ಸಿಕ್ಕದೆ, ನಿಜವಾದ ಮೋಕ್ಷದ ಸಾಧನೆಯ ದಾರಿಯಾದಾಗ, ಇದೇ ಗುರಿಗೆ ನಮ್ಮನ್ನು ಕರೆದೊಯ್ಯು ತ್ತದೆ.

ಭಕ್ತಿಯಲ್ಲಿ ನಮಗಿರುವ ಒಂದು ಸೌಲಭ್ಯವೆಂದರೆ ಅದು ನಮ್ಮ ದೈವಿಕವಾದ ಗುರಿಯನ್ನು ಮುಟ್ಟಲು ಬಹಳ ಸುಲಭವಾದ ಮತ್ತು ಸ್ವಾಭಾವಿಕವಾದ ದಾರಿ. ನಮಗೆ ಅದರಲ್ಲಿರುವ ಪ್ರತಿಕೂಲವೆಂದರೆ ಅದು ಪ್ರಾರಂಭ ದೆಸೆಯಲ್ಲಿ ಮಿತಿಮೀರಿದ ಸ್ವಮತಾಭಿಮಾನ ಮತ್ತು ಪರದೂಷಣೆಯಲ್ಲಿ ಕೊನೆಗಾಣುತ್ತದೆ. ಹಿಂದೂಗಳಲ್ಲಿಯೂ, ಮುಸಲ್ಮಾ ನರಲ್ಲಿಯೂ, ಕ್ರಿಸ್ತರಲ್ಲಿಯೂ ಪರಮತದ್ವೇಷಿಗಳಾದ ಅಂಥ ಸ್ವಮತಾ ಭಿಮಾನಿಗಳು ಈ ಬಗೆಯ ಕೆಳದರ್ಜೆಯ ಭಕ್ತಿಪೂಜಕರೇ ಆಗಿರುತ್ತಾರೆ. ನಿಷ್ಠೆಯಿಲ್ಲದಿದ್ದರೆ ಯಾವ ವಸ್ತುವಿನಲ್ಲಿಯೂ ಪ್ರೇಮವು ಉಂಟಾಗುವು ದಿಲ್ಲ. ನಮ್ಮನ್ನು ನಮ್ಮ ಪ್ರೇಮದ ವಸ್ತುವಿಗೆ ಬಂಧಿಸತಕ್ಕುದು ನಿಷ್ಠೆ.

ಆದರೆ ನಮ್ಮ ಪಲ್ಲದ್ದನ್ನೆಲ್ಲಾ ದೂರುವ, ದೂಷಿಸುವ ಸ್ವಭಾವವು ಅನೇಕ ವೇಳೆ ನಮ್ಮ ನಿಷ್ಠೆಯಿಂದ ನಮಗೆ ಉಂಟಾಗುತ್ತದೆ. ಪ್ರತಿಯೊಂದು ದೇಶದಲ್ಲಿಯೂ ಪ್ರತಿಯೊಂದು ಮತದಲ್ಲಿಯೂ ದುರ್ಬಲರಾದ ಮತ್ತು ಅಪೂರ್ಣ ಬೆಳವಣಿಗೆಯುಳ್ಳ ಮನಸ್ಸಿನ ಜನರಿಗೆ ತಮ್ಮ ಮತವನ್ನು ಪ್ರೀತಿಸಲು ಇರುವುದು ಒಂದೇ ದಾರಿ. ಇತರರ ಆದರ್ಶಗಳನ್ನು ದೂರುವುದೇ ಆ ದಾರಿ. ತನ್ನ ಭಾವನೆಯ ದೇವರಿಗೆ ಪೂರ್ಣಪ್ರೇಮದಿಂದ ಬಂಧಿತನಾಗಿ, ತನ್ನ ಮತವನ್ನು ಪ್ರೀತಿಸುವ ಮನುಷ್ಯನು, ಇತರರ ಅಭಿಪ್ರಾಯವನ್ನು ಕೇಳಿದೊಡನೆಯೆ ಹುಚ್ಚುನಾಯಿಯಂತೆ ಜಗಳವುದಕ್ಕೆ ಇದೇ ಕಾರಣ. ಈ ಪ್ರೇಮವು, ಇತರರು ಮುಟ್ಟದಂತೆ ಯಜಮಾನನ ವಸ್ತುಗಳನ್ನು ಕಾಯುವ ನಾಯಿಯ ಸ್ವಭಾವದಂತೆ ಇದೆ. ನಾಯಿಯ ಸ್ವಾಭಾವಿಕ ಬುದ್ಧಿಯು ಮನುಷ್ಯನ ವಿವೇಕಕ್ಕಿಂತ ತೀಕ್ಷ್ಣವಾದುದು. ಯಾಕೆಂದರೆ ಯಜಮಾನನು ತನ್ನ ಎದುರಿಗೆ ಯಾವ ಉಡುಪಿನಲ್ಲಿ ಬಂದರೂ ನಾಯಿಯು ಅವನನ್ನು ಗುರುತಿಸುತ್ತದೆ. ಆದರೆ ಪರಮತ ಅಸಹಿಷ್ಣುವು ವಿವೇಕಜ್ಞಾನವನ್ನೇ ಕಳೆದುಕೊಳ್ಳುತ್ತಾನೆ. ಅವನಿಗೆ ವೈಯಕ್ತಿಕ ವಿಚಾರಗಳೇ ಅತಿ ಪ್ರಾಮುಖ್ಯವಾಗಿ, ಎದುರಾಳಿಯು ಏನು ಹೇಳುತ್ತಾನೆ—ಅದು ಸರಿಯೇ ತಪ್ಪೇ ಎಂಬುದನ್ನೇ ಅವನು ಮರೆಯುತ್ತಾನೆ. ಅವನು ಮುಖ್ಯವಾಗಿ ತಿಳಿಯಲಪೇಕ್ಷಿಸುವುದು 'ಹೇಳುವವರಾರು?' ಎಂಬುದು. ತನ್ನಂತೆ ಅಭಿಪ್ರಾಯವುಳ್ಳ ಜನರ ವಿಷಯದಲ್ಲಿ ಒಳ್ಳೆಯವನಾಗಿ ದಯಾಪರನಾಗಿರುವ ಮನುಷ್ಯನೇ, ತನ್ನ ಮತ ಬಾಂಧವರಲ್ಲದವರೊಂದಿಗೆ ವ್ಯವಹರಿಸುವಾಗ ಅತಿ ಹೀನವಾದ ಕೆಲಸಗಳನ್ನು ಮಾಡಲು ಹಿಂದೆಗೆಯುವುದಿಲ್ಲ.

ಇದು ಭಕ್ತಿಯ ಪ್ರಾರಂಭದೆಸೆಯಲ್ಲಿ (ಗೌಣ) ಮಾತ್ರ ಇರುತ್ತದೆ. ಆದರೆ ಭಕ್ತಿಯು ಹಣ್ಣಾಗಿ 'ಪರಾಭಕ್ತಿ'ಯಾಗಿ ಮಾರ್ಪಟ್ಟಾಗ, ಈ ಪರಮತ ಅಸಹಿಷ್ಣುತೆಯ ಭೂತಗಳ ಭಯವೇನು ಇರುವುದಿಲ್ಲ. ಯಾಕೆಂದರೆ ಈ ಭಕ್ತಿಯಿಂದ ತುಂಬಿದ ಆತ್ಮವು, ದ್ವೇಷವನ್ನು ಪ್ರಸರಿಸಲು ಅವಕಾಶವಿಲ್ಲದಂತೆ ಪ್ರೇಮದ ದೇವರ ಹತ್ತಿರಕ್ಕೆ ಹೋಗುತ್ತದೆ.

ಜೀವನದಲ್ಲಿ ಸ್ವಭಾವ ಗುಣಗಳ ಬೆಳವಣಿಗೆಯು ನಮಗೆಲ್ಲ ಒಂದೇ

ಸಮನಾಗಿ ಇರುವುದಿಲ್ಲ. ಆದರೆ ಯಾವ ಜೀವನದಲ್ಲಿ ಜ್ಞಾನ ಭಕ್ತಿ ಮತ್ತು ಯೋಗಗಳು ಸಮನಾಗಿವೆಯೋ ಅದು ಅತ್ಯುತ್ತಮವಾದ ಜೀವನವೆಂಬುದು ನಮಗೆಲ್ಲಾ ತಿಳಿದೇ ಇದೆ. ಹಕ್ಕಿಗೆ ಹಾರಲು ಮೂರು ವಸ್ತುಗಳು ಆವಶ್ಯಕ. ಎರಡು ರೆಕ್ಕೆಗಳು ಮತ್ತು ದೋಣಿಯನ್ನು ನಡೆ ಸುವ ಕೈಪಿಡಿಯಂತೆ ಒಂದು ಬಾಲ. ಜ್ಞಾನವು ಒಂದು ರೆಕ್ಕೆ, ಭಕ್ತಿಯು ಇನ್ನೊಂದು ರೆಕ್ಕೆ. ಇವೆರಡನ್ನೂ ಹೆಚ್ಚು ಕಡಮೆಯಾಗದಂತೆ ಸಮನಾಗಿ ನಿಲ್ಲಿಸುವುದು ಯೋಗ. ಈ ಮೂರನ್ನೂ ಏಕಕಾಲದಲ್ಲಿ ಸಮನಾಗಿ ಅನು ಸರಿಸಲು ಶಕ್ತಿಯಿಲ್ಲದೆ ಭಕ್ತಿಯನ್ನು ಮಾತ್ರ ಅನುಸರಿಸುವವರು, ಆತ್ಮದ ಪಾರಿಶುದ್ಧ್ಯಕ್ಕೆ ಬಾಹ್ಯಕರ್ಮಗಳೂ ಪೂಜಾ ಭಜನೆಗಳೂ ಆವಶ್ಯಕ ವಾದರೂ, ಪರಮಾತ್ಮನಲ್ಲಿ ನಮಗೆ ನಿಕಟವಾದ ಭಕ್ತಿಯನ್ನು ಉಂಟು ಮಾಡುವುದಕ್ಕೆ ಮಾತ್ರ ಅವು ಸಹಕಾರಿಯೆಂಬುದನ್ನೂ ಅವುಗಳಿಂದ ಮತ್ತೇನೂ ಪ್ರಯೋಜನವಿಲ್ಲವೆಂಬುದನ್ನೂ ಮರೆಯದಿರಬೇಕು.

ಜ್ಞಾನಮಾರ್ಗ ಮತ್ತು ಭಕ್ತಿಮಾರ್ಗ ಬೋಧಕರ ಬೋಧನೆಗಳಲ್ಲಿ ಇಬ್ಬರೂ ಭಕ್ತಿಯ ಪ್ರಭಾವವನ್ನು ಒಪ್ಪುತ್ತಾರಾದರೂ—ಸ್ವಲ್ಪ ವ್ಯತ್ಯಾಸ ವಿದೆ. ಜ್ಞಾನಮಾರ್ಗ ಬೋಧಕರು, ಭಕ್ತಿಯು ಮೋಕ್ಷದ ಸಾಧನ ಮಾತ್ರವೆಂದು ಹೇಳುವರು. ಆದರೆ ಭಕ್ತರು ಭಕ್ತಿಯೇ ಮೋಕ್ಷದ ಸಾಧನವೆಂದೂ, ಅದೇ ಮೋಕ್ಷವೂ ಎಂದೂ ಹೇಳುವರು. ಅನೇಕರಿಗೆ, ಈ ಎರಡು ಅಭಿಪ್ರಾಯಗಳಲ್ಲೂ ಹೆಚ್ಚು ವ್ಯತ್ಯಾಸವಿರುವಂತೆ ಕಾಣುವು ದಿಲ್ಲ. ಆದರೆ ವಾಸ್ತವವಾಗಿ ಭಕ್ತಿಯು ಮೋಕ್ಷದ ಸಾಧನೆಯಾದಾಗ ಕೆಳದರ್ಜೆಯ ಪೂಜೆ ಮಾತ್ರವಾಗುತ್ತದೆ. ಅನಂತರ ಮೋಕ್ಷಕ್ಕೂ ಸಾಧಕವಾದ ಪೂಜೆಗೂ ಹೆಚ್ಚು ವ್ಯತ್ಯಾಸವೇ ಉಳಿಯುವುದಿಲ್ಲ. 'ಭಕ್ತರೂ' ಜ್ಞಾನಿಗಳೂ ತಮ್ಮ ತಮ್ಮ ಪೂಜೆಯ ದಾರಿಗಳಲ್ಲಿಯೇ ಪೂರ್ಣರಾಗಿ ಆಸಕ್ತರಾಗಿರುವುದರಿಂದ ಭಕ್ತಿಯ ಪರಾವಸ್ಥೆಯಲ್ಲಿ ಜ್ಞಾನವೂ, ಜ್ಞಾನದ ಪರಾಕಾಷ್ಠೆಯಲ್ಲಿ ಭಕ್ತಿಯೂ ಒಂದಾಗುವುದೆಂಬು ದನ್ನು ಅವರು ಪೂರ್ಣವಾಗಿ ಮರತೇ ಬಿಡುತ್ತಾರೆ.

ಇದನ್ನು ಮನಸ್ಸಿನಲ್ಲಿಟ್ಟುಕೊಂಡು ನಾಸ್ಸರಾದ ವೇದಾಂತದ

ವ್ಯಾಖ್ಯಾನಕಾರರು ಈ ವಿಷಯದ ಮೇಲೆ ಏನು ಹೇಳಿರುವರೆಂಬುದನ್ನು ತಿಳಿದುಕೊಳ್ಳಲು ನಾವು ಯತ್ನಿಸೋಣ. 'ಆವೃತ್ತಿರಸಕೃದುಪದೇಶಾತ್'* ಈ ಸೂತ್ರವನ್ನು ವಿವರಿಸುವುದರಲ್ಲಿ ಭಗವಾನ್ ಶಂಕರರು ಹೀಗೆ ಹೇಳಿದ್ದಾರೆ: "ಜನರು ಹೀಗೆ ಹೇಳುತ್ತಾರೆ, ಅವನಿಗೆ ಧೊರೆಯಲ್ಲಿ ಭಕ್ತಿಯಿದೆ. ದೇವರಲ್ಲಿ ಭಕ್ತಿಯಿದೆ.' ಗುರುವನ್ನೂ ಧೊರೆಯನ್ನೂ ಅನುಸರಿಸುವುದನ್ನೇ ಗುರಿಯಾಗಿಟ್ಟುಕೊಂಡು ಇರುವವನನ್ನು ಕುರಿತು ಹೀಗೆ ಹೇಳುತ್ತಾರೆ: ಅದೇ ರೀತಿ 'ಪ್ರೇಮಪೂರಿತಳಾದ ಹೆಂಡತಿಯು ದೂರದೇಶದಲ್ಲಿರುವ ಗಂಡನ ಧ್ಯಾನವನ್ನು ಸದಾ ಮಾಡುತ್ತಾಳೆ.' ಇಲ್ಲಿಯೂ ಕೂಡ ಅವಿಚ್ಛಿನ್ನವಾದ ಕಾತರಧ್ಯಾನವೆಂದು ಅರ್ಥ." ಭಗವಾನ್ ಶಂಕರರ ಅಭಿಪ್ರಾಯದಂತೆ ಇದು ಭಕ್ತಿ. †

ಒಂದು ಪಾತ್ರೆಯಿಂದ ಮತ್ತೊಂದು ಪಾತ್ರೆಗೆ ಎಣ್ಣೆಯನ್ನು ಬಿಟ್ಟರೆ ಯಾವ ರೀತಿ ಬಿಡುವಿಲ್ಲದೆ ಸುರಿಯುವುದೋ ಆ ರೀತಿ ಬಿಡುವಿಲ್ಲದೆ ಧ್ಯಾನಮಾಡುವುದು ಒಂದು ಭಕ್ತಿಯ ವಿಧ. ದೇವರಲ್ಲಿ, ಈ ಧ್ಯಾನವು ಸಾಧಿಸಿದರೆ ಆಗ ಎಲ್ಲಾ ಬಂಧನಗಳೂ ಬಿಡಲ್ಪಡುತ್ತವೆ. ವೇದಗಳಲ್ಲಿ ಮೋಕ್ಷಕ್ಕೆ ಈ ತೆರದ ಧ್ಯಾನವು ಸಾಧಕವೆಂದು ಹೇಳಿದೆ. "ಎಲ್ಲೆಲ್ಲು ಇರುವವನನ್ನು ನಾವು ಯಾವಾಗಲೂ ನೋಡಿದರೆ ಹೃದಯದ ಬಂಧನಗಳೆಲ್ಲಾ ಬಿಡುಗಡೆಯಾಗುತ್ತವೆ, ಸಂಶಯಗಳೆಲ್ಲಾ ತೊಲಗುತ್ತವೆ, ಕರ್ಮಫಲಗಳೆಲ್ಲಾ ನಾಶವಾಗುತ್ತವೆ" ಈ ವಾಕ್ಯದಿಂದ ಧ್ಯಾನವೆಂದರೆ ನೋಡುವುದೆಂದು ಅರ್ಥವಾಗುತ್ತದೆ. ನಾವು ಹತ್ತಿರದಲ್ಲೂ ದೂರದಲ್ಲೂ ಇರುವವನನ್ನು ನೋಡಬೇಕೆಂದು ವೇದಗಳು ಹೇಳುವುದರಿಂದ, ಈ ವಿಧವಾದ ಧ್ಯಾನವು ನೋಡಿದಂತೆಯೇ ಎಂಬುದಾಗಿ ಅವು ಸೂಚಿಸಿದಂತೆ ಅರ್ಥವಾಗುತ್ತದೆ. ಈ ಧ್ಯಾನವು ಮೇಲೆಮೇಲೆ ಹೋದಹಾಗೆ

---

* ಆವೃತ್ತಿರಸಕೃದುಪದೇಶಾತ್ (ವೇದಾಂತಸೂತ್ರ ೪-೧-೧)

† ತಥಾಹಿ ಲೋಕೇ ಗುರುಮುಪಾಸ್ತೇ ರಾಜಾನಮುಪಾಸ್ತ ಇತಿ ಚ ಯಸ್ತಾತ್ಪರ್ಯೇಣ ಗುರ್ವಾದೀನನುವರ್ತತೆ ಸ ಏವಂ ಉಚ್ಯತೆ. ತಥಾ ಧ್ಯಾಯತಿ ಪ್ರೋಷಿತನಾಥಾ ಪತಿಮಿತಿ ಯಾ ನಿರಂತರ ಸ್ಮರಣಾ ಪತಿಂ ಪ್ರತಿ ಸೋತ್ಕಂಠಾ ಸೈವಮಭಿಧೀಯತೆ (ವೇದಾಂತಸೂತ್ರ ಶಂಕರಭಾಷ್ಯ ೪-೧-೧)

ದೃಷ್ಟಿಯಾಗುತ್ತದೆ. ವೇದಗಳ ಮುಖ್ಯ ಋಕ್ಕುಗಳಲ್ಲಿ ಹೇಳಿರುವಂತೆ ಯಾವಾಗಲೂ ಧ್ಯಾನ ಮಾಡುವುದೇ ಅರ್ಚನೆ. ಸದಾ ಮಾಡುವ ಅರ್ಚನೆಯೇ ಜ್ಞಾನ....ಜ್ಞಾನವೇ ಸದಾಧ್ಯಾನ....ಧ್ಯಾನದಿಂದ ದೇವರನ್ನು 'ಎದುರಿಗೆ ನೋಡಿದಷ್ಟರ' ಮಟ್ಟಕ್ಕೆ ಏರಿದ ಮನಸ್ಸೇ, ಶ್ರುತಿಗಳ ಅಭಿಪ್ರಾಯದಂತೆ ಮೋಕ್ಷದ ಸಾಧನೆಯು. 'ಈ ಆತ್ಮನನ್ನು ಬಗೆ ಬಗೆಯ ಶಾಸ್ತ್ರಾಭ್ಯಾಸಗಳಿಂದಲೂ, ಬುದ್ಧಿಯಿಂದಲೂ, ವೇದಗಳ ವ್ಯಾಸಂಗದಿಂದಲೂ ಮುಟ್ಟುವುದು ಸಾಧ್ಯವಿಲ್ಲ. ಆತ್ಮವು ಯಾರನ್ನು ಅಪೇಕ್ಷಿಸುವುದೋ ಅವನಿಗೆ ಮಾತ್ರ ಆತ್ಮವು ಸಿದ್ಧಿಸುತ್ತದೆ ಮತ್ತು ಆತ್ಮವು ಅವನ ಮನೋದೃಷ್ಟಿಗೆ ಮಾತ್ರ ಗೋಚರವಾಗುತ್ತದೆ.' ಕೇಳುವುದು, ಯೋಚಿಸುವುದು, ಧ್ಯಾನಮಾಡುವುದು ಇವುಗಳು ಆತ್ಮಸಿದ್ಧಿಯ ಮಾರ್ಗಗಳಲ್ಲ. 'ಆತ್ಮವು ಯಾರನ್ನು ಅಪೇಕ್ಷಿಸುತ್ತದೋ ಅವನಿಗೇ ಆತ್ಮವು ಸಿದ್ಧಿಸುತ್ತದೆ.' ಪ್ರೀತಿಪಾತ್ರವಾದುದು ಮಾತ್ರ ಆತ್ಮನಿಗೆ ಬೇಕು. ಯಾರು ಆತ್ಮನನ್ನು ಪೂರ್ಣವಾಗಿ ಪ್ರೀತಿಸುತ್ತಾರೋ ಅವರು ಆತ್ಮದ ಪೂರ್ಣಪ್ರೀತಿಗೆ ಪಾತ್ರರಾಗುತ್ತಾರೆ. ಆತ್ಮದ ಪೂರ್ಣಪ್ರೀತಿಗೆ ಪಾತ್ರರಾದವರಿಗೆ ಆತ್ಮವು ಸಿದ್ಧಿಸಲು ಭಗವಂತನೇ ಸಹಾಯ ಮಾಡುತ್ತಾನೆ. 'ಯಾರು ನನ್ನನ್ನೆ ನಂಬಿ ನನ್ನನ್ನು ಪ್ರೇಮದಿಂದ ಪೂಜಿಸುತ್ತಾರೋ ಅಂಥಾವರು ನನ್ನ ಬಳಿಗೇ ಬರುವಂತೆ ಅವರ ಮನಸ್ಸನ್ನು ನಾನು ಪ್ರೇರಿಸುತ್ತೇನೆ.' ಆದುದರಿಂದ ಯಾರಿಗೆ ಧ್ಯಾನವು ದೇವರನ್ನು ಪ್ರತ್ಯಕ್ಷವಾಗಿ ಕಂಡಷ್ಟು ಇಷ್ಟವಾಗುತ್ತದೋ ಅವನೇ ಆತ್ಮಕ್ಕೆ ಬೇಕಾದವನಾಗುತ್ತಾನೆ—ಅಂದರೆ ಆತ್ಮವು ಅವನಿಗೆ ಮಾತ್ರ ಸಿದ್ಧಿಸುತ್ತದೆ. ಈ ಸದಾಧ್ಯಾನವೇ ಭಕ್ತಿ. 'ಆವೃತ್ತಿರಸಕೃದುಪದೇಶಾತ್' ಎಂಬ ಸೂತ್ರಕ್ಕೆ ಭಗವಾನ್ ರಾಮಾನುಜರು ಮೇಲಿನಂತೆ ವ್ಯಾಖ್ಯಾನ ಮಾಡಿದ್ದಾರೆ.

'ಈಶ್ವರ ಪ್ರಣಿಧಾನಾದ್ವಾ' ‡ ಎಂಬ ಪತಂಜಲಿ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಭೋಜನು ಈ ರೀತಿ ಹೇಳಿದ್ದಾನೆ: 'ವಿಷಯ

‡ಈಶ್ವರ ಪ್ರಣಿಧಾನಾದ್ವಾ (ಪತಂಜಲಿಸೂತ್ರ ೧—೨೩)

ಸುಖಗಳೇ ಮುಂತಾದ ಫಲಗಳನ್ನು ಅಪೇಕ್ಷಿಸದೆ ಸಮಸ್ತ ಕಾರ್ಯ ಗಳನ್ನೂ ಭಗವಂತನಿಗೆ ಅರ್ಪಿಸುವುದು' * ಎಂಬುದಾಗಿ ಹೇಳಿದ್ದಾನೆ. ಭಗವಾನ್ ವ್ಯಾಸರೂ ಕೂಡ 'ಭಗವಂತನ ಕರುಣೆಯು ಯೋಗಿಗೆ ಉಂಟಾಗಿ ಆತನ ಆಸೆಗಳೆಲ್ಲ ಪೂರ್ಣವಾಗತಕ್ಕ ಭಕ್ತಿಯೇ ಪ್ರಣಿಧಾನ ಎಂಬುದಾಗಿ ಹೇಳಿದ್ದಾರೆ.' ‡ ಶಾಂಡಿಲ್ಯರ ಅಭಿಪ್ರಾಯದಂತೆ 'ಭಕ್ತಿಯು ದೇವರಲ್ಲಿ ನಿಕಟವಾದ ಪ್ರೇಮ.' ಭಕ್ತರ ಧೊರೆಯಾದ ಪ್ರಹ್ಲಾದನಿಂದ ಭಕ್ತಿಯ ಬಹು ಶ್ರೇಷ್ಠವಾದ ಲಕ್ಷಣಗಳು ಈ ರೀತಿ ಹೇಳಲ್ಪಟ್ಟಿವೆ. 'ಅವಿವೇಕಿಗಳಿಗೆ ವಿಷಯಸುಖಗಳಲ್ಲಿ ಎಷ್ಟು ಪ್ರೀತಿಯಿದೆಯೋ, ನನಗೆ ನಿನ್ನಲ್ಲಿ ಅಂತಹ ಪ್ರೀತಿಯು ಎಂದಿಗೂ ಮಾಯವಾಗದೇ ಇರಲಿ' † ಯಾರಲ್ಲಿ ಪ್ರೀತಿ? ಸರ್ವಶಕ್ತನಾದ ಈಶ್ವರನಲ್ಲಿ. ಉಳಿದವರು ಎಷ್ಟೇ ದೊಡ್ಡವರಾಗಿರಲಿ ಅವರಲ್ಲ ಇಟ್ಟ ಪ್ರೇಮವು ಭಕ್ತಿಯಲ್ಲ. ಯಾಕೆಂದರೆ ಭಗವಾನ್ ರಾಮಾನುಜರು ಶ್ರೀ ಭಾಷ್ಯದಲ್ಲಿ ಪ್ರಾಚೀನ ಆಚಾರ್ಯರ ಅಭಿ ಪ್ರಾಯವನ್ನು ಈ ರೀತಿ ಹೇಳಿದ್ದಾರೆ: 'ಬ್ರಹ್ಮನಿಂದ ಹಿಡಿದು ಹುಲ್ಲು ಗುಂಪಿನ ವರೆಗೆ, ಎಲ್ಲಾ ವಸ್ತುಗಳೂ ಕರ್ಮದಿಂದ ಬಂಧಿತರಾಗಿ ಜನನ ಮರಣದ ಒಲೆಯಲ್ಲಿ ಒದ್ದಾಡುತ್ತಾರೆ. ಇವುಗಳು ಧ್ಯಾನಯೋಗ್ಯವಾದ ವಸ್ತುಗಳಲ್ಲ. ಯಾಕೆಂದರೆ ಅವುಗಳು ಅಜ್ಞಾನಿಗಳಾಗಿಯೂ ಪದೇಪದೇ ಬದಲಾವಣೆಯನ್ನು ಹೊಂದತಕ್ಕವುಗಳಾಗಿಯೂ ಇವೆ.'* ಶಾಂಡಿಲ್ಯನು

---

* ಪ್ರಣಿಧಾನಂ ತತ್ರ ಭಕ್ತಿವಿಶೇಷಾ ವಿಶಿಷ್ಟ ಮುಪಾಸನಂ
ಸರ್ವಕ್ರಿಯಾಣಾಮಪಿ ತತ್ರಾರ್ಪಣಂ ವಿಷಯ ಸುಖಾದಿಕಂ ಫಲಮನಿಚ್ಛನ್ ಸರ್ವಾಃ
ಕ್ರಿಯಾಸ್ತಸ್ಮಿನ್ ಪರಮ ಗುರಾವರ್ಪಯತಿ (ಪತಂಜಲಿ ಸೂತ್ರ ೧—೨೩)

‡ ಪ್ರಣಿಧಾನಾದ್ಭಕ್ತಿವಿಶೇಷಾದಾವರ್ಜಿತ ಈಶ್ವರಸ್ತಮನುಗ್ರಹ್ಣತ್ಯಭಿಧ್ಯಾನ ಮಾತ್ರೇಣ ಸಾ ಪರಾನುರಕ್ತಿರೀಶ್ವರೇ (ಶಾಂಡಿಲ್ಯಸೂತ್ರ ೧—೨)

† ಯಾ ಪ್ರೀತಿರವಿವೇಕಾನಾಂ ವಿಷಯೇಷ್ವನಪಾಯಿನೀ ತ್ವಾ ಮನುಸ್ಮರತಃ ಸಾ ಮೇ ಹೃದಯಾನ್ಮಾಪಸರ್ಪತು.

* ಆಬ್ರಹ್ಮಸ್ತಂಬ ಪರ್ಯಂತಾ ಜಗದಂತರ್ವ್ಯವಸ್ಥಿತಾಃ ।
ಪ್ರಾಣಿನಃ ಕರ್ಮಜನಿತ ಸಂಸಾರವಶವರ್ತಿನಃ ॥
ಯತಸ್ತತೋನತೇಧ್ಯಾನೇ ಧ್ಯಾನಿನಾಮುಪಕಾರಕಾಃ ।
ಅವಿದ್ಯಾಂತರ್ಗತಾ ಸರ್ವೇತೇಹಿ ಸಂಸಾರಗೋಚರಾಃ ॥

ಉಪಯೋಗಿಸಿರುವ ಅನುರಕ್ತಿ ಎಂಬ ಪದಕ್ಕೆ ವ್ಯಾಖ್ಯಾನ ಮಾಡುತ್ತಾ ಸ್ವಪ್ನೇಶ್ವರನು, ಅನು ಎಂದರೆ ಅನಂತರ ಎಂತಲೂ ರಕ್ತಿ ಎಂದರೆ ಬಂಧನ ವೆಂದೂ ಹೇಳಿದ್ದಾನೆ. ಅಂದರೆ ಭಗವಂತನ ಮಹಿಮೆಯನ್ನೂ ಯೋಗ್ಯತೆ ಯನ್ನೂ ತಿಳಿದನಂತರ ಬರುವ ಪ್ರೇಮವೆಂದು ಅರ್ಥ.‡ ಹಾಗಲ್ಲದಿದ್ದರೆ ಹೆಂಡತಿಯಲ್ಲಾಗಲಿ ಮಗನಲ್ಲಾಗಲಿ ಇಟ್ಟಿರುವ ಕುರುಡು ಮೋಹವೂ ಕೂಡ ಭಕ್ತಿಯೇ ಆಗಬಹುದು. ಆದುದರಿಂದ ಭಕ್ತಿಯು ಸಾಮಾನ್ಯ ವಾದ ದೇವರಪೂಜೆಯಿಂದ ಪ್ರಾರಂಭವಾಗಿ ಅನೇಕ ವಿಧವಾದ ಮಾನ ಸಿಕ ಮತ್ತು ಧಾರ್ಮಿಕ ಸಾಧನೆಗಳಿಂದ ಮೇಲೇರಿ ಕೊನೆಗೆ ಈಶ್ವರನಲ್ಲಿ ಪೂರ್ಣವಾಗಿ ಗಾಢವಾಗಿ ಪ್ರೇಮದಲ್ಲಿ ಐಕ್ಯವಾಗುವುದು.

## ೨ ಈಶ್ವರ ವೇದಾಂತ

ಈಶ್ವರನು ಯಾರು? 'ಯಾರು ವಿಶ್ವದ ಸೃಷ್ಟಿಸ್ಥಿತಿಲಯಗಳಿಗೆ ಕಾರ ಣನೋ ಅವನು' ಎಂಬುದಾಗಿ ವೇದಾಂತಸೂತ್ರವು ಹೇಳುತ್ತದೆ. (ಜನ್ಮಾ ದ್ಯಸ್ಯ ಯತಃ) ಯಾವುದಕ್ಕೆ ಎಂದಿಗೂ ಚ್ಯುತಿಯಿಲ್ಲವೊ, ಯಾವುದು ನಿತ್ಯಶುದ್ಧವೂ, ಸ್ವತಂತ್ರವೂ, ಸರ್ವಶಕ್ತಿಯುಳ್ಳದುದೂ, ಸರ್ವ ಜ್ಞಾನಿಯೂ, ಸರ್ವವ್ಯಾಪಿಯೂ, ಅನಿರ್ವಚನೀಯ ಪ್ರೇಮಸ್ವರೂಪ ವುಳ್ಳದೂ ಆಗಿದೆಯೋ ಅದೇ ಈಶ್ವರನು. *

ಇವು ನಿಶ್ಚಯವಾಗಿಯೂ 'ವ್ಯಕ್ತಿ ದೇವರ' ಲಕ್ಷಣಗಳು. ಹಾಗಾದರೆ ದೇವರಲ್ಲಿ ಎರಡು ವಿಧಗಳಿವೆಯೆ? ವೇದಾಂತಿಗಳ ಸಚ್ಚಿದಾ ನಂದ ಸ್ವರೂಪನಾದ 'ನೇತಿ ನೇತಿ'; ಮತ್ತು ಭಕ್ತರ ಪ್ರೇಮಮೂರ್ತಿ. ಇಲ್ಲ, ಭಕ್ತರ ದೇವರ ಸಚ್ಚಿದಾನಂದ ಮೂರ್ತಿಯೆ, ಈ ದೇವರೇ ವ್ಯಕ್ತಿ ರೂಪದ ಮತ್ತು ಅವ್ಯಕ್ತ ರೂಪದ ದೇವರು. ಭಕ್ತನು ಪೂಜಿಸುವ ವ್ಯಕ್ತಿ

‡ ಭಗವನ್ಮಹಿಮಾದಿ ಜ್ಞಾನಾದನುಪಶ್ಚಾಜ್ಜಾಯಮಾನತ್ವಾದನುರಕ್ತಿಃ ಇತ್ಯುಕ್ತಂ
ಸ್ವಪ್ನೇಶ್ವರವ್ಯಾಖ್ಯಾನ ಶಾಂಡಿಲ್ಯಸೂತ್ರ ೧—೨

* ಸ ಈಶ್ವರ ಅನಿರ್ವಚನೀಯ ಪ್ರೇಮಸ್ವರೂಪಃ

ದೇವರು ಬ್ರಹ್ಮನ್ ಹೊರತು ಬೇರೆಯಲ್ಲ. ಎಲ್ಲವೂ ಬ್ರಹ್ಮವೆ; ಅದ್ವಿತೀಯವಾದ ಬ್ರಹ್ಮವೆ. ಆದರೆ ಪ್ರೀತಿಸುವುದಕ್ಕೂ ಪೂಜಿಸುವುದಕ್ಕೂ ಬ್ರಹ್ಮವು ಬಹಳ ಸೂಕ್ಷ್ಮವಾಗಿರುವುದರಿಂದ, ಭಕ್ತನು ಬ್ರಹ್ಮನ ವ್ಯಕ್ತಿಸ್ವರೂಪವಾದ ಈಶ್ವರನನ್ನು ಆರಿಸಿಕೊಳ್ಳುತ್ತಾನೆ. ಉದಾಹರಣೆಗಾಗಿ ಬ್ರಹ್ಮನು ಜೇಡಿಮಣ್ಣಿನ ಹಾಗೆ. ಆದರಿಂದ ಯಾವ ಸಾಮಾನನ್ನು ಬೇಕಾದರೂ ಮಾಡಬಹುದು. ಅವುಗಳೆಲ್ಲ ಒಂದೆ. ಆದರೆ ಅವುಗಳ ಬಾಹ್ಯಸ್ವರೂಪವು ಮಾತ್ರ ಬೇರೆಬೇರೆಯಾಗಿದೆ. ಅವುಗಳಾವುದನ್ನೂ ಮಾಡುವುದಕ್ಕೆ ಮುಂಚೆ, ಅವುಗಳೆಲ್ಲವೂ ಮೂಲಭೂತವಾಗಿ ಜೇಡಿಮಣ್ಣಿನಲ್ಲಿ ಅಡಕವಾಗಿದ್ದುವು. ಮೂಲದಲ್ಲಿ ಅವುಗಳೆಲ್ಲಾ ನಿಸ್ಸಂದೇಹವಾಗಿ ಒಂದೆ. ಆದರೆ ಅವು ಬೇರೆ ಬೇರೆ ಆಕಾರದಲ್ಲಿ ಇರುವವರೆಗೆ ಬೇರೆ ಬೇರೆಯೆ. ಜೇಡಿಮಣ್ಣಿನ ಇಲಿಯು ಜೇಡಿಮಣ್ಣಿನ ಆನೆಯಾಗಲಾರದು. ಅವು ಆಕಾರದಿಂದಲೆ ಬೇರೆಬೇರೆಯಾಗಿವೆ. ಈಶ್ವರನೇ ಪರಬ್ರಹ್ಮದ ಅತಿ ಮಹತ್ತಾದ ಪ್ರಕಾಶ. ಬೇರೆ ಮಾತುಗಳಲ್ಲಿ ಹೇಳಬೇಕಾದರೆ ಪರಬ್ರಹ್ಮದ ವಿಷಯದಲ್ಲಿ ಮನುಷ್ಯನಿಗೆ ಗೊತ್ತಿರುವುದು ಈಶ್ವರನೆ. ಸೃಷ್ಟಿಯು ಕೊನೆಯಿಲ್ಲದುದು. ಈಶ್ವರನೂ ಹಾಗೆಯೆ.

ಮಹರ್ಷಿ ವ್ಯಾಸರು ವೇದಾಂತ ಸೂತ್ರದ ನಾಲ್ಕನೆ ಅಧ್ಯಾಯದ ನಾಲ್ಕನೆ ಪಾದದಲ್ಲಿ, ಮೋಕ್ಷಸಾಧನೆಯನ್ನು ಹೊಂದಿದ ಆತ್ಮನಿಗೆ ಅಖಂಡವಾದ ಜ್ಞಾನವೂ ಶಕ್ತಿಯೂ ಲಭಿಸುವುದೆಂದು ಹೇಳಿದ್ದಾರೆ. ಅದೇ ಸೂತ್ರದಲ್ಲಿ ಮೋಕ್ಷವನ್ನು ಹೊಂದಿದ ಜ್ಞಾನಿಯೂ ಎಷ್ಟೇ ಶಕ್ತನಾದರೂ ಸೃಷ್ಟಿಸ್ಥಿತಿಲಯಗಳನ್ನು ನಡೆಸಲು ಅವನಿಗೆ ಮಹಿಮೆಯುಂಟಾಗುವುದಿಲ್ಲವೆಂದೂ ಅದು ಈಶ್ವರನೊಬ್ಬನಿಗೆ ಮಾತ್ರ ಸಾಧ್ಯವೆಂದೂ ಹೇಳಿದ್ದಾರೆ. 'ಜಗದ್ವ್ಯಾಪಾರ ವರ್ಜಂ ಪ್ರಕರಣಾತ್ ಅಸನ್ನಿಹಿತತ್ವಾಚ್ಚ' ಈ ಸೂತ್ರಕ್ಕೆ ವ್ಯಾಖ್ಯಾನಮಾಡುವಾಗ, ದ್ವೈತಿಗಳು ಅಸ್ವಾತಂತ್ರ್ಯವಾದ ಜೀವಾತ್ಮನಿಗೆ, ಪರಮಾತ್ಮನಂತೆ ಶಕ್ತಿಯನ್ನೂ ಪೂರ್ಣ ಸ್ವಾತಂತ್ರ್ಯವನ್ನೂ ಹೊಂದುವುದು ಅಸಾಧ್ಯವೆಂದು ಬಹಳ ಸುಲಭವಾಗಿ ತೋರಿಸುತ್ತಾರೆ. ನುರಿತ ದ್ವೈತ ವ್ಯಾಖ್ಯಾನಕಾರರಾದ ಮಧ್ವಾಚಾರ್ಯರು ತಮಗೆ

ಸ್ವಭಾವವಾದ ಸೂಕ್ಷ್ಮರೀತಿಯಲ್ಲಿ ಈ ಸೂತ್ರದ ವ್ಯಾಖ್ಯಾನವನ್ನು ವರಾಹ ಪುರಾಣದ ಒಂದು ಶ್ಲೋಕವನ್ನು ಹೇಳಿ ಮುಗಿಸಿದ್ದಾರೆ.

ವೇದಾಂತ ಸೂತ್ರದ 'ಜಗದ್ವ್ಯಾಪಾರ ವರ್ಜಂ ಪ್ರಕರಣಾತ್ ಅಸನ್ನಿಹಿತತ್ವಾಚ್ಚ' ಎಂಬುದಕ್ಕೆ ವಿಶಿಷ್ಟಾದ್ವೈತ ಸಿದ್ಧಾಂತಿಗಳಾದ ರಾಮಾನುಜಾಚಾರ್ಯರು ಈ ರೀತಿ ವ್ಯಾಖ್ಯಾನಮಾಡಿದ್ದಾರೆ:— ಮೋಕ್ಷವನ್ನು ಹೊಂದಿದ ಆತ್ಮನ ಮಹಿಮೆಗಳೊಳಗೆ ಸೃಷ್ಟಿಸ್ಥಿತಿಲಯದ ಶಕ್ತಿಯೂ ಸೇರಿದೆಯೇ ಅಥವಾ ಆ ಮೋಕ್ಷವೆಂಬುದು ಪರಮಾತ್ಮ ನನ್ನು ಸಿದ್ಧಿಸಿಕೊಳ್ಳುವುದು ಮಾತ್ರವೋ ಎಂಬುದೇ ಇಲ್ಲಿ ಸಂದಿಗ್ಧ ವಿಷಯ. ಮೋಕ್ಷವನ್ನು ಹೊಂದಿದವನು, ಬ್ರಹ್ಮಾಂಡದ ಪ್ರಭು ವಾಗುತ್ತಾನೆಂದು ನಾವು ಸಕಾರಣವಾಗಿ ಊಹಿಸಿಕೊಳ್ಳೋಣ. ಯಾಕೆಂದರೆ ಮೋಕ್ಷವನ್ನು ಹೊಂದಿದ ಆತ್ಮನು ಪರಮಾತ್ಮನಂತೆಯೇ ಆಗುವನೆಂದು ವೇದಗಳು ಹೇಳುತ್ತವೆ. ಮುಂಡೂಕ ಉಪನಿಷತ್ತಿನ ೧೧೧–೩ ವಾಕ್ಯಗಳಲ್ಲಿ 'ಪಾಪಗಳಿಂದ ಬಿಡಲ್ಪಟ್ಟವನು ಪರಮಾತ್ಮನಿಗೆ ಸಮನಾಗುತ್ತಾನೆಂದು' ಹೇಳಿದೆ. 'ಅವನ ಆಸೆಗಳೆಲ್ಲಾ ಸಿದ್ಧಿಸುತ್ತವೆ' ಪರಮಾತ್ಮನ ಮುಖ್ಯ ಶಕ್ತಿಯಾದ ವಿಶ್ವದ ಪ್ರಭುತ್ವವನ್ನು ಹೊಂದಿದ ಹೊರತು, ಪರಮಾತ್ಮನೊಂದಿಗೆ ಸಮತ್ವವಾಗಲಿ, ಸಮಸ್ತ ಆಸೆಗಳ ಸಿದ್ಧಿಯಾಗಲಿ ಉಂಟಾಗುವುದಿಲ್ಲ. ಆದುದರಿಂದ ಭಗವಂತನೊಂದಿಗೆ ಸಮವಾಗಿ ಸಮಸ್ತ ಆಸೆಗಳ ಸಿದ್ಧಿಯನ್ನೂ ಹೊಂದುವುದು ನಿಜವಾದರೆ ಪ್ರಪಂಚವನ್ನು ಆಳುವ ಶಕ್ತಿಯನ್ನೂ ವಿಶ್ವದ ಪ್ರಭುತ್ವವನ್ನೂ ಹೊಂದು ವುದು ನಿಶ್ಚಯವೆಂದು ಹೇಳಬಹುದು. ಇದಕ್ಕೆ ನಾವು ಮೋಕ್ಷವನ್ನು ಹೊಂದಿದವನಿಗೆ ಎಲ್ಲಾ ಶಕ್ತಿಗಳೂ ಸಾಧ್ಯವೆಂದೂ ಆದರೆ ಬ್ರಹ್ಮಾಂಡದ ಪ್ರಭುತ್ವವು ಮಾತ್ರ ಸಾಧ್ಯವಿಲ್ಲವೆಂದೂ ಹೇಳುತ್ತೇವೆ. ವಿಶ್ವದ ಪ್ರಭುತ್ವ ವೆಂದರೆ ವಿಶ್ವದ ಚರಾಚರ ಬುದ್ಧಿರಹಿತ ಮತ್ತು ಬುದ್ಧಿಹೀನ ಸಮಸ್ತ ಸೃಷ್ಟಿಗಳನ್ನೂ ವ್ಯವಸ್ಥೆಯಿಂದ ನಡೆಸುವುದೆಂದು ಅರ್ಥ. ಈ ಕಾರ್ಯವು ಜೀವನದ ಬಂಧನಗಳನ್ನೆಲ್ಲಾ ಕಿತ್ತೊಗೆದು ಯಾವ ಆತಂಕವೂ ಇಲ್ಲದೆ ಬ್ರಹ್ಮನನ್ನು ಪೂರ್ಣವಾಗಿಯೂ ಪ್ರಕಾಶವಾಗಿಯೂ ನೋಡುವ

ವೈಭವವನ್ನು ಅನುಭವಿಸುವ ಜ್ಞಾನಿಯದಲ್ಲ. ಬ್ರಹ್ಮಾಂಡದ ಸ್ವಾಮಿತ್ವವು ಈಶ್ವರನದು ಮಾತ್ರ ಎಂಬುದಾಗಿ ಹೇಳಿರುವ ವಾಕ್ಯಗಳೂ ಕೂಡ ಇದಕ್ಕೆ ನಿದರ್ಶನವಾಗಿವೆ. 'ಯಾರಿಂದ ಈ ಎಲ್ಲಾ ಸೃಷ್ಟಿಯೂ ಆಗಿದೆಯೊ, ಸೃಷ್ಟಿಸಲ್ಪಟ್ಟ ವಸ್ತುಗಳೆಲ್ಲಾ ಯಾರಿಂದ ಉಳಿದಿವೆಯೋ, ಮತ್ತು ಯಾರಲ್ಲಿಗೆ ಇವೆಲ್ಲಾ ಹಿಂದಿರುಗುವುವೊ—ಅದರ ವಿಷಯವನ್ನು ಕೇಳು. ಅದೇ ಬ್ರಹ್ಮ, ಬ್ರಹ್ಮಾಂಡವನ್ನು ಆಳುವ ಶಕ್ತಿಯು ಬ್ರಹ್ಮನಿಗೂ ಮುಕ್ತನಿಗೂ ಸಮಾನವಾಗಿದ್ದಿದ್ದರೆ, ಆಗ ಮೇಲಿನ ವಾಕ್ಯಗಳು ಸರಿಯಾಗಿ ಅನ್ವಯಿಸುತ್ತಿರಲಿಲ್ಲ, ಯಾಕೆಂದರೆ ಬ್ರಹ್ಮಾಂಡವನ್ನು ಆಳುವುದೇ ಬ್ರಹ್ಮನನ್ನು ಉಳಿದವುಗಳಿಂದ ಬೇರೆ ಮಾಡುವ ಗುಣ. ವೇದದ ಋಕ್ಕುಗಳಲ್ಲಿ, ಮುಂದೆ ಹೇಳುವಂತೆ ವಿಶೇಷ ಗುಣಗಳು ಮಾತ್ರ ಉಕ್ತವಾಗಿವೆ. 'ನನ್ನ ಪ್ರಿಯ ಶಿಷ್ಯನೆ, ಪ್ರಾರಂಭದಲ್ಲಿ ಅದ್ವಿತೀಯವಾಗಿ ಒಂದೇ ಒಂದು ಇದ್ದಿತು. ಅದು ನೋಡಿ ನಾನು ಇನ್ನೂ ಅನೇಕವನ್ನು ಸೃಷ್ಟಿಸುವೆನು ಎಂದುಕೊಂಡಿತು. ಅದರಿಂದ ಅಗ್ನಿಯು ಹೊರಟಿತು.' ಮತ್ತೆ 'ಪ್ರಾರಂಭದಲ್ಲಿ ಬ್ರಹ್ಮನು ಮಾತ್ರ ಇದ್ದಿತು. ಅದರಿಂದ ಬೆಳವಣಿಗೆ ಉಂಟಾಯಿತು. ಅದು 'ಕ್ಷತ್ರ'ವನ್ನು ಬೆಳೆಸಿತು. ಈ ದೇವರುಗಳೆಲ್ಲಾ ಕ್ಷತ್ರರೆ. ವರುಣ, ಸೋಮ, ರುದ್ರ, ಪರ್ಜನ್ಯ, ಯಮ, ಮೃತ್ಯು, ಈಶಾನ ಇವರೆಲ್ಲಾ ಕ್ಷತ್ರರೆ.' ಮತ್ತೆ 'ಪ್ರಾರಂಭದಲ್ಲಿ ಆತ್ಮನು ಮಾತ್ರ ಇದ್ದಿತು. ಮತ್ತಾವುದೂ ಜೀವಿಸಿರಲಿಲ್ಲ. ಆಗ ತಾನೇ ಬೆಳೆದು ಇತರ ಪ್ರಪಂಚಗಳನ್ನು ಸೃಷ್ಟಿಸಬೇಕೆಂದು ಆತ್ಮನಿಗೆ ಅನ್ನಿಸಿತು. ಆತ್ಮನು ಅನಂತರ ಪ್ರಪಂಚಗಳನ್ನು ಸೃಷ್ಟಿಸಿದನು.' ಮತ್ತೆ 'ನಾರಾಯಣನು ಒಬ್ಬನೇ ಇದ್ದನು. ಬ್ರಹ್ಮ, ಈಶಾನ, ದ್ಯಾವಾಪೃಥ್ವಿ, ನಕ್ಷತ್ರಗಳು, ನೀರು, ಬೆಂಕಿ, ಸೋಮ, ಸೂರ್ಯ ಯಾರೂ ಇರಲಿಲ್ಲ. ಒಂಟಿಯಾಗಿರುವುದರಲ್ಲಿ ಆತ್ಮನಿಗೆ ಸಂತೋಷವಿರಲಿಲ್ಲ. ಅವನು ಧ್ಯಾನಾನಂತರ ಒಬ್ಬ ಮಗಳನ್ನೂ ಹತ್ತು ಇಂದ್ರಿಯಗಳನ್ನೂ ಸೃಷ್ಟಿಸಿದಳು.' ಮತ್ತೆ 'ಯಾರು ಪ್ರಪಂಚದಲ್ಲಿದ್ದರೂ ಪ್ರಪಂಚದಿಂದ ಬೇರೆಯಾಗಿರುವರೋ, ಯಾರು ಆತ್ಮದಲ್ಲಿ ಇದ್ದು . . . .' ಈ ಋಕ್ಕುಗಳಲ್ಲೆಲ್ಲಾ ಶ್ರುತಿಗಳು

ವಿಶ್ವದ ಪ್ರಭುವು ಪರಮಾತ್ಮನೆಂದು ಹೇಳಿವೆ. ಮತ್ತು ವಿಶ್ವವನ್ನು ಆಳುವ ಈ ವಾಕ್ಯಗಳಲ್ಲಿ ಎಲ್ಲೂ ಮುಕ್ತನ ಸುದ್ದಿ ಬಂದಿಲ್ಲ. ಯಾತಕ್ಕೆಂದರೆ ವಿಶ್ವದ ಪ್ರಭುತ್ವವು ಮೋಕ್ಷವನ್ನು ಹೊಂದಿದ ಆತ್ಮದ ಸ್ವಭಾವಕ್ಕೆ ಬಹಳ ದೂರವಾದುದು.

ಮುಂದಲ ಸೂತ್ರದ ವ್ಯಾಖ್ಯಾನದಲ್ಲಿ (ವೇದಾಂತಸೂತ್ರ೪-೪-೧೮) ರಾಮಾನುಜಾಚಾರ್ರು ಹೀಗೆ ಹೇಳಿದ್ದಾರೆ 'ವೇದಗಳಲ್ಲಿ ವಿರೋಧವಾಗಿ ಬೇರೆ ಋಕ್ಕುಗಳಿವೆಯೆಂದು ನೀವು ಹೇಳುವುದಾದರೆ, ಮೋಕ್ಷವನ್ನು ಹೊಂದಿದ ಆತ್ಮನು ದೇವತೆಗಳ ಮಧ್ಯೆ ಹೊಂದುವ ವೈಭವಕ್ಕೆ ಮಾತ್ರ ಅದು ಅನ್ವಯಿಸುತ್ತದೆ.' ಇದೂ ಕೂಡ ಈ ಕಷ್ಟಕ್ಕೆ ಸುಲಭವಾದ ಪರಿಹಾರ. ರಾಮಾನುಜಾಚಾರ್ರ ಅವರ ಅಭಿಪ್ರಾಯದಂತೆ ವೇದಾಂತವು ವಿಶ್ವದ ಏಕತ್ವವನ್ನು ಒಪ್ಪುವುದಾದರೂ, ಆ ಏಕತ್ವದಲ್ಲಿ ಅನೇಕ ಶಾಶ್ವತವಾದ ಸಣ್ಣಸಣ್ಣಭೇದಗಳಿವೆ. ಆದುದರಿಂದ ಈ ವಾದವೂ ದ್ವೈತವಾದುದರಿಂದ, ಪರಮಾತ್ಮನಿಗೂ ಜೀವಾತ್ಮನಿಗೂ ಇರುವ ವ್ಯತ್ಯಾಸವನ್ನು ಮಂಕಾಗದಂತೆ ಇರಿಸುವುದು ಅವರಿಗೆ ಸುಲಭವಾಗಿದ್ದಿತು.

ಅದ್ವೈತ ವೇದಾಂತದ ಮಹಾತ್ಮನಾದ ಪ್ರತಿನಿಧಿಯು ಈ ವಿಚಾರದಲ್ಲಿ ಏನು ಹೇಳಿದ್ದಾನೆಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸೋಣ. ಅದ್ವೈತ ವೇದಾಂತವು ದ್ವೈತ ವೇದಾಂತದ ಆಸೆಯನ್ನೂ ಸಚ್ಚನ್ನೂ ಉಳಿಸಿಕೊಂಡು ಮಾನವನ ದೈವಿತ್ವಕ್ಕೆ ಸರಿಬರುವಂತಹ ದಾರಿಯನ್ನು ಸ್ಥಾಪಿಸಿರುತ್ತದೆ. ಮುಕ್ತರಾದ ಮೇಲೆ ಕೂಡ, ತಮ್ಮ ಮನಸ್ಸನ್ನು ಬೇರೆಯಾಗಿಟ್ಟುಕೊಂಡು, ಪರಬ್ರಹ್ಮನಿಂದ ಬೇರೆಯಾಗಿದ್ದುಕೊಂಡು ಬ್ರಹ್ಮನ ವೈಭವಗಳನ್ನೆಲ್ಲಾ ಅನುಭವಿಸುವುದಕ್ಕೆ ಬೇಕಾದಂತೆ ಆಸ್ಪದವಿದೆ. ಇಂತವರ ವಿಷಯವನ್ನು ಕುರಿತು ಭಾಗವತದಲ್ಲಿ ಹೀಗೆ ಹೇಳಿದೆ—

ಆತ್ಮಾರಾಮಾಶ್ಚ ಮುನಯೋ ನಿರ್ಗ್ರಂಥಾ ಅಪಾರುಕ್ರಮೆ<br>ಕುರ್ವಂತಾಹೈತುಕೀಂ ಭಕ್ತಿಂ ಇತ್ಥಮ್ಭೂತ ಗುಣೋಹರಿಃ

'ಎಲೈ ದೊರೆಯೆ, ಪರಬ್ರಹ್ಮನ ಮಹಿಮೆಯು ಎಷ್ಟರಮಟ್ಟಿನದೆಂದರೆ, ಸರ್ವಸಂಗಪರಿತ್ಯಾಗಿಗಳಾಗಿ ಸ್ವತಂತ್ರರಾದ ಮುನಿಗಳೂ ಕೂಡ,

ಆತ್ಮದಲ್ಲೇ ಪ್ರವೃತ್ತ ಮನಸ್ಸುಳ್ಳವರಾದರೂ ಪ್ರೇಮಕ್ಕಾಗಿಯೇ ಅವರು ಸರ್ವಶಕ್ತನಾದ ಭಗವಂತನನ್ನು ಪ್ರೀತಿಸುತ್ತಾರೆ. ಇವರ ವಿಷಯವನ್ನು ಕುರಿತು ಸಾಂಖ್ಯರು 'ಈ ಸೃಷ್ಟಿಯಲ್ಲಿ ಅವರು ಪ್ರಕೃತಿಯಲ್ಲಿ ಲೀನರಾಗುತ್ತಾರೆ. ಅಂದರೆ ಮುಂದಿನ ಸೃಷ್ಟಿಯಲ್ಲಿ ಅವರೇ ಬ್ರಹ್ಮಾಂಡಗಳ ಪ್ರಭುಗಳಾಗುತ್ತಾರೆ' ಎಂಬುದಾಗಿ ಹೇಳಿದ್ದಾರೆ. ಆದರೆ ಇವರಾರೂ ಈಶ್ವರ ಅಥವ ಪರಮಾತ್ಮನಿಗೆ ಸಮವಾಗುವುದಿಲ್ಲ. ಎಲ್ಲಿ ಸೃಷ್ಟಿಯೂ, ಸೃಷ್ಟಿಸಲ್ಪಟ್ಟ ಜಗತ್ತೂ, ಸೃಷ್ಟಿಕರ್ತನೂ ಇಲ್ಲವೋ, ಎಲ್ಲಿ ಜ್ಞಾನಿಯೂ, ಜ್ಞಾನವೂ ಜ್ಞಾತವೂ ಇಲ್ಲವೋ, ಎಲ್ಲಿ ನೀನು, ನಾನು, ಅವನು ಇಲ್ಲವೋ, ಎಲ್ಲಿ ಪ್ರಕೃತಿಯೂ, ಪುರುಷನೂ, ಅವುಗಳೆರಡರ ಸಂಬಂಧವೂ ಇಲ್ಲವೋ, ಅಂತಹ ಕಡೆ ಯಾರು ಯಾರನ್ನು ನೋಡಬಲ್ಲರು 'ತತ್ರ ಕಃ ಕಂ ಪಶ್ಯೇತ್.' ಎಲ್ಲಿಗೆ ಮಾತು, ಮನಸ್ಸು ಮುಟ್ಟದೋ 'ಯತೋ ವಾಚಾ ನಿವರ್ತಂತೆ ಅಪ್ರಾಪ್ಯಮನಸಾಸಹ.' ಎಲ್ಲಿ ಶ್ರುತಿಗಳು ಪರಮಾತ್ಮನನ್ನು 'ನೇತಿ ನೇತಿ' ಎಂದು ಸಂಬೋಧಿಸುವುವೋ ಆ ಮಟ್ಟಕ್ಕೆ ಏರಿದವರು ಎಲ್ಲವನ್ನೂ ಮೀರಿದ್ದಾರೆ. ಆದರೆ ಈ ಮಟ್ಟಕ್ಕೆ ಏರದವರಿಗೆ ಯಾವಾಗಲೂ ಪೂರ್ಣವಾದ ಭೇದವಿಲ್ಲದ ಬ್ರಹ್ಮದ, ಪ್ರಕೃತಿ, ಆತ್ಮ ಮತ್ತು ಎರಡರ ಮಧ್ಯದ ಈಶ್ವರ ಇದ್ದೇ ಇರುತ್ತದೆ. ಪ್ರಹ್ಲಾದನು ಅತಿಯಾದ ಭಕ್ತಿಯಿಂದ ತನ್ನನ್ನು ತಾನು ಮರೆತು ಮೇಲೇರಿದಾಗ ವಿಶ್ವವೂ ಅದರ ಕಾರಣವೂ ಇದ್ದಿತೆಂಬುದನ್ನೇ ಅವನು ಮರೆತನು. ಆಗ ಅವನಿಗೆ ಹೆಸರೂ ಆಕಾರವೂ ಇಲ್ಲದ ಕಾಲಾತೀತವಾದ ಬ್ರಹ್ಮ' ಮಾತ್ರ ಇದ್ದಿತು. ಆದರೆ ಅವನು ಆ ಮಟ್ಟದಿಂದ ಮಾನವತೆಗೆ ಇಳಿದು ತಾನು ಪ್ರಹ್ಲಾದನೆಂಬುದನ್ನು ಜ್ಞಾಪಿಸಿಕೊಂಡಕೂಡಲೆ ಈ ಬ್ರಹ್ಮಾಂಡವೂ ಇದಕ್ಕೆ ಒಡೆಯನಾದ 'ಅನೇಕ ಸುಗುಣಪೂರಿತನಾದ ಪರಮಾತ್ಮನೂ ಅವನ ಎದುರಿಗೆ ಬಂದರು. ಗೋಪಿಯರಿಗೂ ಹೀಗೆಯೇ ಆಯಿತು. ಶ್ರೀಕೃಷ್ಣನಲ್ಲಿ ಪೂರ್ಣವಾದ ಪ್ರೇಮವನ್ನಿಟ್ಟು ತಮ್ಮ ವ್ಯಕ್ತಿತ್ವವನ್ನು ಯಾವಾಗ ಅವರು ಮರೆತರೋ, ಆಗ ಅವರೆಲ್ಲರಿಗೂ ತಾವೇ ಕೃಷ್ಣನೆಂಬ ಭಾವನೆಯುಂಟಾಯಿತು. ಆದರೆ ಅವರಿಗೆ ಯಾವಾಗ ಕೃಷ್ಣನು 'ಅವನೆಂದೂ' ತಾವು

ಗೋಪಿಯರು ಅವನನ್ನು ಪೂಜಿಸಬೇಕೆಂದೂ ತೋರಿತೋ, ಆಗ ಅವರ ಕಣ್ಣಿಗೆ ಪೀತಾಂಬರಧಾರಿಯಾದ, ಕಮಲದಂತೆ ಮುಖವುಳ್ಳವನಾದ, ಮನ್ಮಥನಿಗೂ ಮನ್ಮಥನಾದ, ಶೂರನಾದ ಕೃಷ್ಣನು ಕಾಣಿಸಿಕೊಂಡನು. *

ಈಗ ಶಂಕರಾಚಾರ್ಯರನ್ನು ಕೇಳೋಣ. ಸಗುಣಬ್ರಹ್ಮದ ಆರಾಧನೆಯಿಂದ ಮುಕ್ತಿಯನ್ನು ಹೊಂದಿ ಬ್ರಹ್ಮನಲ್ಲಿ ಒಂದಾಗುವ ಆತ್ಮಗಳ ಶಕ್ತಿಗೆ ಮಿತಿಯುಂಟೆ ಅಥವಾ ಮಿತಿಯಿಲ್ಲವೆ? ಈ ಸಂಶಯವು ಬಂದರೆ ನಾವು ಈ ತರ್ಕಗಳನ್ನು ಮಾಡಬೇಕಾಗುತ್ತದೆ. ಅವರ ಶಕ್ತಿಗೆ ಮಿತಿಯಿಲ್ಲ. ಯಾಕೆಂದರೆ 'ಅವರಿಗೆ ಸ್ವರಾಜ್ಯವು ಲಭಿಸುವುದು'—ಅವನಿಗೆ ದೇವತೆಗಳೆಲ್ಲಾ ಪೂಜೆಯನ್ನು ಅರ್ಪಿಸುವರು'–'ಅವರ ಆಸೆಗಳು ಎಲ್ಲಾ ಪ್ರಪಂಚಗಳಲ್ಲಿಯೂ ಪೂರೈಸಲ್ಪಡುವುವು.' ಇದಕ್ಕೆ ಉತ್ತರವಾಗಿ ವ್ಯಾಸರು 'ಬ್ರಹ್ಮಾಂಡದ ಪ್ರಭುತ್ವದ ಹೊರತಾಗಿ' ಎಂಬ ಮಾತನ್ನು ಹಾಕಿದ್ದಾರೆ. ಬ್ರಹ್ಮಾಂಡದ ಸೃಷ್ಟಿಸ್ಥಿತಿಲಯಗಳ ಶಕ್ತಿಯ ಹೊರತು, ಅಣುವಿನಂತೆ ಸೂಕ್ಷ್ಮವಾಗುವುದೇ ಮುಂತಾದ ಎಲ್ಲಾ ಶಕ್ತಿಗಳೂ ಅವನಿಗೆ ಉಂಟಾಗುತ್ತವೆ. ಬ್ರಹ್ಮಾಂಡದ ಪ್ರಭುತ್ವವು ನಿತ್ಯಶುದ್ಧನಾದ ಈಶ್ವರನಿಗೆ ಮಾತ್ರ ಸೇರಿದುದು. ಯಾಕೆಂದರೆ ಬ್ರಹ್ಮಾಂಡದ ಪ್ರಭುತ್ವಕ್ಕೆ ಸಂಬಂಧಪಟ್ಟ ವೇದದ ಋಕ್ಕುಗಳಿಗೆಲ್ಲಾ ವಿಷಯವಾಗಿರುವವನು ಈಶ್ವರನು. ಆ ಪ್ರಸಂಗಗಳಲ್ಲಿ ಮುಕ್ತನ ವಿಷಯವು ಉಕ್ತವಾಗಿಲ್ಲ. ಬ್ರಹ್ಮಾಂಡದ ಪ್ರಭುತ್ವದಲ್ಲಿ ತೊಡಗಿರುವವನು ಪರಬ್ರಹ್ಮನೊಬ್ಬನೆ. ಸೃಷ್ಟಿಗೆ ಸಂಬಂಧಪಟ್ಟ ವೇದಗಳಲ್ಲಿ ಅವನ ವಿಚಾರ ಮಾತ್ರ ಹೇಳಿದೆ. ನಿತ್ಯಶುದ್ಧನೆನ್ನಿಸಿಕೊಳ್ಳುವವನು ಅವನೊಬ್ಬನೆ. ಮುಕ್ತನ 'ಅಣಿಮಾ' (ಸಣ್ಣ ಕಣವಷ್ಟು ಸೂಕ್ಷ್ಮವಾಗುವುದು) ಮುಂತಾದ ಶಕ್ತಿಗಳೆಲ್ಲಾ, ವೇದಗಳು ಹೇಳುವಂತೆ ಭಗವಂತನನ್ನು ಹುಡುಕುವುದರಿಂದ ಬರುವ ಫಲಗಳು. ಈ ಫಲಗಳಿಗೆ ಒಂದು ಪ್ರಾರಂಭವೂ ಒಂದು ಕೊನೆಯೂ

* ತಾಸಾಮಾವಿರಭೂಚ್ಛೌರಿಃ ಸ್ಮಯಮಾನಮುಖಾಂಬುಜಃ
ಪೀತಾಂಬರಧರಃ ಸ್ರಗ್ವೀ ಸಾಕ್ಷಾನ್ಮನ್ಮಥಮನ್ಮಥಃ

ಇದೆ. ಆದುದರಿಂದ ಬ್ರಹ್ಮಾಂಡವನ್ನು ಆಳುವುದರಲ್ಲಿ ಅವುಗಳಿಗೆ ಸ್ಥಾನವಿಲ್ಲ. ಅಲ್ಲದೆ ಮುಕ್ತರಾದವರಿಗೆಲ್ಲಾ ಬೇರೆಬೇರೆ ಮನಸ್ಸು ಇರುವುದರಿಂದ ಅವರಲ್ಲೇ ಒಬ್ಬರಿಗೊಬ್ಬರಿಗೆ ವ್ಯತ್ಯಾಸ ಬರಬಹುದು. ಒಬ್ಬನಿಗೆ ಸೃಷ್ಟಿಯು ಬೇಕಾದಾಗ ಮತ್ತೊಬ್ಬನಿಗೆ ಲಯವು ಬೇಕಾಗಬಹುದು. ಈ ವ್ಯತ್ಯಾಸಗಳನ್ನೆಲ್ಲಾ ಹೋಗಲಾಡಿಸುವುದಕ್ಕೆ ದಾರಿಯು, ಒಂದು ಮನಸ್ಸಿಗೆ ಎಲ್ಲಾ ಮನಸ್ಸುಗಳನ್ನು ಅಧೀನಮಾಡುವುದೆ. ಆದುದರಿಂದ, ಮುಕ್ತರ ಮನಸ್ಸುಗಳೆಲ್ಲಾ ಪರಮಾತ್ಮನ ಮನಸ್ಸಿಗೆ ಅಧೀನವಾಗಿವೆ† ಎಂಬುದೇ ತೀರ್ಮಾನವು.'

ಆದುದರಿಂದ ಭಕ್ತಿಯನ್ನು ಬ್ರಹ್ಮನ ಕಡೆಗೆ ತಿರುಗಿಸಬಹುದು. ಆದರೆ ಅವನ ವೈಯಕ್ತಿಕ ಸ್ವಭಾವದ ಕಡೆಗೆ ಮಾತ್ರ. ಅವ್ಯಕ್ತ ಬ್ರಹ್ಮನಲ್ಲಿ ಆಸಕ್ತರಾಗಿರುವವರ ದಾರಿಯು ಹೆಚ್ಚು ಕಷ್ಟವಾದುದು.* ಭಕ್ತನು ಮನುಷ್ಯ ಸ್ವಭಾವದ ತೆರೆಗಳ ಜತೆಯಲ್ಲಿ ಸುಖವಾಗಿ ತೇಲಿಕೊಂಡು ಹೋಗುತ್ತಾನೆ. ಬ್ರಹ್ಮನ ವಿಷಯದಲ್ಲಿ 'ವ್ಯಕ್ತಿ' ಯಲ್ಲದ ಮತ್ತಾವ ಭಾವವೂ ನಮಗೆ ಉಂಟಾಗಿಲ್ಲವೆಂಬುದು ನಿಶ್ಚಯ. ಆದರೆ ನಮಗೆ ತಿಳಿದಿರುವ ಎಲ್ಲಾ ವಸ್ತುಗಳ ವಿಷಯವೂ ಹೀಗೆ ಅಲ್ಲವೆ? ಪ್ರಪಂಚದಲ್ಲಿ ಈ ವರೆಗೆ ಅತ್ಯಂತ ದೊಡ್ಡ ಮನಶ್ಶಾಸ್ತ್ರಜ್ಞರಾದ ಭಗವಾನ್ ಕಪಿಲರು, ಅನೇಕ ಶತಮಾನಗಳ ಹಿಂದೆ, ನಮ್ಮ ಕಣ್ಣಿಗೆ ತೋರಿ ನಮ್ಮ ಮನಸ್ಸಿನಲ್ಲಿ ಮೂಡತಕ್ಕ ವಸ್ತುನಿರ್ಮಾಣಗಳಲ್ಲಿ ಮನುಷ್ಯನ ಮನಸ್ಸೂ ಒಂದೆಂದು ತೋರಿಸಿಕೊಟ್ಟಿದ್ದಾರೆ. ನಮ್ಮ ಈ ದೇಹದಿಂದ ಹಿಡಿದು ಈಶ್ವರನ ವರೆಗೆ ನಮ್ಮ ಕಣ್ಣಿಗೆ ಕಾಣತಕ್ಕ ಎಲ್ಲಾ ವಸ್ತುಗಳೂ ನಮ್ಮ ಮನಸ್ಸು ಮತ್ತು ಮತ್ತಾವುದೋ ಸೇರಿ—ಆ ಮತ್ತಾವುದೋ ಎಂಬುದು ಏನಾದರೂ ಇರಲಿ—ಆಗಿವೆ. ಆ ಎರಡರ ಅನಿವಾರ್ಯವಾದ ಮಿಲನವೇ ನಮ್ಮ ಅಭಿಪ್ರಾಯದಲ್ಲಿ 'ಸತ್' ಎಂಬುದು. ಮನುಷ್ಯನ ಮನಸ್ಸಿಗೆ ತಿಳಿದಿರುವ, ತಿಳಿಯಬಹುದಾದ ಸತ್ಯವು ಎಂದೆಂದಿಗೂ ಅಷ್ಟೆ.

---

† ವೇದಾಂತಸೂತ್ರಗಳು—೪—೪—೧೭

* ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾ ಸಕ್ತ ಚೇತಸಾಮ್ (ಗೀತಾ ೫—೧೨—೫)

ಆದುದರಿಂದ ಈಶ್ವರನ ವಿಷಯವಾದ ನಮ್ಮ ಅಭಿಪ್ರಾಯವು 'ವೈಯಕ್ತಿ' ಕವಾಗಿರುವುದರಿಂದ ಈಶ್ವರನೇ ಇಲ್ಲವೆಂದೂ, ಮಾಯೆಯೆಂದೂ ಹೇಳು ವುದೂ ಸರಿಯಾದುದಲ್ಲ. ಇದು ಪಾಶ್ಚಾತ್ಯರ ಅರ್ಥರಹಿತವಾದ ವಸ್ತು ವಾದ ಮತ್ತು ಆದರ್ಶವಾದ ಚರ್ಚೆಯಂತೆ ತೋರುತ್ತದೆ. ಈಶ್ವರ ಎಂಬ ಪದದಲ್ಲಿ ಸತ್ ಎಂಬ ಪದದಲ್ಲಿರುವ ಅಭಿಪ್ರಾಯವೆಲ್ಲಾ ಅಡಕವಾಗಿದೆ. ಬ್ರಹ್ಮಾಂಡದಲ್ಲಿ ಉಳಿದವು ಹೇಗೆ ಸತ್ಯವೋ ಈಶ್ವರನೂ ಅಷ್ಟೇ ಸತ್ಯ. ಸತ್ ಎಂಬುದಕ್ಕೆ ನಾವು ಮೇಲೆ ಹೇಳಿದ ಅರ್ಥದ ಹೊರತು ಮತ್ತೇನೂ ಹೆಚ್ಚಿಗೆ ಇಲ್ಲ. ಹಿಂದೂ ವೇದಾಂತದಲ್ಲಿ ಈಶ್ವರಭಾವನೆಯು ಈ ರೀತಿ ಯಾಗಿದೆ.

## ೩ ಆತ್ಮಸಾಕ್ಷಾತ್ಕಾರವೇ ಭಕ್ತಿಯೋಗದ ಗುರಿ

ವೇದಗಳ ಮೇಲಿನ ಒಣ ಚರ್ಚೆಗಳು ಭಕ್ತನ ಮನಶ್ಶಕ್ತಿಯನ್ನು ಬಲಪಡಿಸಲು ಮಾತ್ರ ಆವಶ್ಯಕವಾಗಿವೆ. ಇದರ ಹೊರತು ಆ ಚರ್ಚೆಗಳು ಆತನಿಗೆ ಯಾವ ಪ್ರಯೋಜನಕ್ಕೂ ಬರುವುದಿಲ್ಲ. ಯಾತಕ್ಕೆಂದರೆ ಸ್ವಲ್ಪ ಕಾಲದೊಳಗೆ ಆತನು ಮಂಕಾದ ಮತ್ತು ಚರ್ಚಾಸ್ಪದವಾದ ಕಾರಣ ಪ್ರಪಂಚವನ್ನು ಮೀರಿದ ದಾರಿಯಲ್ಲಿ ಕಾಲಿಡುತ್ತಾನೆ. ಮತ್ತು ಬೇಗ ಭಗವಂತನ ಕೃಪೆಯಿಂದ ಕಾರ್ಯಕಾರಣ ಜಡವಾದವನ್ನು ಮೀರಿದ ಮಟ್ಟಕ್ಕೆ ಏರುತ್ತಾನೆ, ಕತ್ತಲಲ್ಲಿ ದೇವರನ್ನು ಹುಡುಕುತ್ತಿರುವ ಬುದ್ಧಿಗೆ ಆಗ ಬೆಳಕೂ ಪ್ರತ್ಯಕ್ಷ ಅನುಭವವೂ ಗೋಚರವಾಗುತ್ತವೆ. ಅನಂತರ ಆತನು ವಾದ ಮಾಡುವುದಿಲ್ಲ; ನಂಬುವುದೂ ಇಲ್ಲ; ಆದರೆ ಪ್ರತ್ಯಕ್ಷವಾಗಿ ಕಾಣುತ್ತಾನೆ. ಅಲ್ಲಿಂದ ಮುಂದೆ ಆತನು ಚರ್ಚೆ ಮಾಡುವುದಿಲ್ಲ; ಅನುಭವಿಸುತ್ತಾನೆ. ದೇವರನ್ನು ಈ ರೀತಿ ನೋಡಿ, ಅನುಭವಿಸಿ ಆನಂದಪಡುವುದು ದೇವರನ್ನು ಕುರಿತು ಚರ್ಚೆ ಮಾಡುವ ದಕ್ಕಿಂತ ಉತ್ತಮವಾದುದಲ್ಲವೆ? ಅಷ್ಟೇ ಅಲ್ಲ. ಈ ಆನಂದವೇ ಮೋಕ್ಷ ಕ್ಕಿಂತ ಹೆಚ್ಚಾದುದೆಂದು ಸಾಧಿಸುವ ಭಕ್ತರೂ ಇಲ್ಲದೇ ಇಲ್ಲ. ಮತ್ತು

ಈ ಆನಂದವೇ ಅತ್ಯುತ್ತಮವಾದ ಗುರಿಯಲ್ಲವೆ? ಮನುಷ್ಯನಿಗೆ ಐಹಿಕ ಸುಖವನ್ನು ಯಾವುದು ಕೊಡುತ್ತದೋ ಅದು ಮಾತ್ರ ಅವನಿಗೆ ಉಪಯುಕ್ತವಾದುದೆಂದು ಹೇಳುವ ಜನರು ಪ್ರಪಂಚದಲ್ಲಿದ್ದಾರೆ. ಅಂಥವರ ಸಂಖ್ಯೆಯೂ ಹೆಚ್ಚಾಗಿಯೇ ಇದೆ. ಧರ್ಮ, ದೇವರು, ವಿಶ್ವ, ಆತ್ಮ ಮುಂತಾದವು ಅವರಿಗೆ ಆವಶ್ಯಕವಿಲ್ಲ. ಯಾಕೆಂದರೆ ಅವು ಅವರಿಗೆ ಹಣವನ್ನಾಗಲಿ ದೈಹಿಕಸುಖವನ್ನಾಗಲಿ ಕೊಡುವುದಿಲ್ಲ. ಅವರ ಇಂದ್ರಿಯಗಳಿಗೆ ತೃಪ್ತಿಯನ್ನುಂಟುಮಾಡದ ಮತ್ತು ಅವರ ಪಶುಸ್ವಭಾವಕ್ಕೆ ಪ್ರೋತ್ಸಾಹವೀಯದ ವಸ್ತುಗಳು ಅವರಿಗೆ ಆವಶ್ಯಕವಿಲ್ಲ. ನಿಶ್ಚಯವಾಗಿಯೂ ಪ್ರತಿಯೊಬ್ಬ ಮನುಷ್ಯನ ಆಸೆ ಆವಶ್ಯಕತೆಗಳು ಏನಿವೆಯೋ, ಒಂದು ವಸ್ತುವಿನ ಉಪಯೋಗವನ್ನು ಕುರಿತ ಅವನ ಅಭಿಪ್ರಾಯಗಳೂ ಅವಕ್ಕೆ ಅನುಕೂಲವಾಗಿವೆ. ತಿನ್ನುವುದು, ಕುಡಿಯುವುದು, ಸಂತಾನೋತ್ಪತ್ತಿ ಇವುಗಳ ಸಂಪರ್ಕವನ್ನು ತೊರೆದು ಮೇಲಕ್ಕೆ ಹೋಗಲಾರದ ಜನರಿಗೆ ಯಾವ ವಸ್ತುವಿನ ಪ್ರಯೋಜನವೂ ಅದನ್ನು ಸ್ವಂತವಾಗಿ ಅನುಭವಿಸುವುದರಲ್ಲೇ ಇದೆ. ಅವುಗಳಿಗಿಂತ ಉತ್ತಮವಾದವುಗಳ ಆವಶ್ಯಕತೆಯುಂಟೆಂಬುದನ್ನು ತಿಳಿಯುವುದಕ್ಕೂ ಅನುಭವಿಸುವುದಕ್ಕೂ ಅವರು, ಎಷ್ಟೋಸಲ ಜನ್ಮಗಳನ್ನು ಎತ್ತಬೇಕಾಗುವುದು. ಆದರೆ ಯಾರಿಗೆ ಈ ಭೌತಜೀವನದ ಕ್ಷಣಿಕವಾದ ಆಚರಣೆಗಳೂ, ಇಂದ್ರಿಯಗಳ ಸುಖಗಳೂ ಮಗುವಿನ ಅರ್ಥವಿಲ್ಲದ ಚೇಷ್ಟೆಗಳಂತೆ ತೋರುತ್ತವೋ ಅವರಿಗೆ ಶಾಶ್ವತವಾದ ಆತ್ಮದ ವಿಕಾಸದಲ್ಲಿ ಮಾತ್ರ ಉತ್ಸಾಹವಿರುತ್ತದೆ. ಪ್ರೇಮದಿಂದ ದೇವರ ಸಾಕ್ಷಾತ್ಕಾರವನ್ನು ಪಡೆಯುವುದೇ ಮನುಷ್ಯಜನ್ಮದ ಅತ್ಯುತ್ತಮವಾದ ಮತ್ತು ಉಪಯೋಗಕರವಾದ ಗುರಿಯೆಂದು ಅವರಿಗೆ ತೋರುತ್ತದೆ. ಈ ಪ್ರಪಂಚದಲ್ಲಿ ಅಂತಹ ಕೆಲವರು ಇನ್ನೂ ಜೀವಿಸಿರುವುದಕ್ಕಾಗಿ ನಾವು ಭಗವಂತನಿಗೆ ಕೃತಜ್ಞರಾಗಿರಬೇಕು.

ನಾವು ಹಿಂದೆ ಹೇಳಿದಂತೆ ಭಕ್ತಿಯೋಗವು ಗೌಣಿ (ಸಿದ್ಧತೆ) ಪರಾ (ಪರಾಕಾಷ್ಠೆ) ಎಂದು ಭಾಗವಾಗಿದೆ. ನಾವು ಮುಂದೆ ಓದುತ್ತಾ ಹೋದಂತೆ, ಪ್ರಾರಂಭದೆಸೆಯಲ್ಲಿ ನಮ್ಮನ್ನು ಮುಂದೆ ಕರೆದೊಯ್ಯಲು,

ಇಂದ್ರಿಯಗಳಿಗೆ ಗೋಚರವಾಗತಕ್ಕ ಅನೇಕ ಸಹಾಯಗಳು ನಮಗೆ ಅನಿವಾರ್ಯವಾಗಿ ಬೇಕಾಗುತ್ತವೆಂಬುದು ಗೊತ್ತಾಗುತ್ತದೆ. ಎಲ್ಲಾ ಧರ್ಮಗಳ ಪುರಾಣಗಳೂ ದೇವರುಗಳೂ, ಉತ್ಸಾಹಿಯಾದ ಭಕ್ತನನ್ನು ದೇವರೆಡೆಗೆ ತರಲು ನುತ್ತುವರಿದು ಸಹಾಯಮಾಡುತ್ತವೆ. ದೊಡ್ಡ ದೊಡ್ಡ ಪುರಾಣಗಳು, ಅನೇಕವಾದ ಧರ್ಮಕರ್ಮಗಳು ಇವುಗಳುಳ್ಳ ಮತಗಳಿಂದಲೇ ಮಹತ್ತಾದ ಆತ್ಮಶಕ್ತಿಯ ಮಹನೀಯರು ಜನಿಸಿರುವ ರೆಂಬುದು ಲಕ್ಷ್ಯದಲ್ಲಿ ಇಡತಕ್ಕ ವಿಷಯ. ಮತಗಳಲ್ಲಿರತಕ್ಕ ಕಾವ್ಯ ಭಾವಗಳನ್ನೂ, ಅವುಗಳಲ್ಲಿ ಮಹತ್ತಾದುದು ಗಂಭೀರವಾದುದು, ದೇವರ ದಾರಿಯನ್ನು ಹುಡುಕಿಕೊಂಡು ಹೋಗತಕ್ಕ ಮಕ್ಕಳಂತಹ ಮನಸ್ಸು ಳ್ಳವರಿಗೂ ತಿಳಿಯತಕ್ಕುದು ಯಾವುದೊ; ಅವುಗಳನ್ನೆಲ್ಲಾ ತೊಡೆದು ಒಟ್ಟಿನಲ್ಲಿ ಮತಗಳ ಸೂರಿನ ಕಂಬಗಳನ್ನೇ ಮುರಿದು, ಸತ್ಯವೆಂಬುದನ್ನೇ ಅಪಾರ್ಥಮಾಡಿಕೊಂಡು ಮನುಷ್ಯನ ಮನಸ್ಸಿನ ಬೆಳವಣಿಗೆಗೂ ಆತ್ಮದ ವಿಕಾಸಕ್ಕೂ ಅಡ್ಡವಾಗಿ ಬರತಕ್ಕ ಮತಭ್ರಾಂತರ ತತ್ವಗಳಲ್ಲಿ, ಬರಿಯ ಮಾತಿನ ಬಯಲತನವೂ ಆತ್ಮಗಳ ಸುಧಾರಣೆ ಸಮಾಜಗಳ ಸುಧಾರಣೆ ಎಂಬ ಒಣಪದಗಳೂ ಮಾತ್ರ ಕಾಣುತ್ತವೆ. ಈ ಬಗೆಯಾದ ಧರ್ಮ ಯಾರದೋ ಅವರಲ್ಲಿ ಬಹುಭಾಗದವರು ತಿಳಿದೋ ತಿಳಿಯದೆಯೋ ಭೌತವಾದಿಗಳಾಗಿರುತ್ತಾರೆ. ಅವರ ಜೀವನದ ಗುರಿಯು ಈ ಪ್ರಪಂಚ ದಲ್ಲೂ ಇತರ ಪ್ರಪಂಚದಲ್ಲೂ ಇಂದ್ರಿಯ ಸುಖಗಳನ್ನು ಅನುಭವಿಸು ವುದೇ ಆಗಿದೆ. ಆದುದರಿಂದಲೇ ಅವರ ದೇಹಸುಖಕ್ಕೆ ಸಹಾಯಮಾಡ ತಕ್ಕ (ಇಷ್ಟಾಪೂರ್ತಿ) ಝಾಡಮಾಲಿ, ಬೀದಿಗುಡಿಸುವವ ಮುಂತಾ ದವರೇ ಅವರ ಅಭಿಪ್ರಾಯದಲ್ಲಿ ಮನುಷ್ಯಜೀವನದ ಪೂರ್ಣ ಗುರಿ. ಈ ವಿಚಿತ್ರ ಭ್ರಾಂತಿ ಮತ್ತು ಅಜ್ಞಾನದ ಜನರು ಎಷ್ಟು ಬೇಗ ಬಂದು ತಮ್ಮ ನಿಜವಾದ ಬಣ್ಣವನ್ನು ಜಗತ್ತಿಗೆ ತೋರಿಸಿ ತಮ್ಮ ಸ್ಥಾನವಾದ ಭೌತವಾದಿಗಳ ಗುಂಪನ್ನು ಸೇರುತ್ತಾರೋ ಪ್ರಪಂಚಕ್ಕೆ ಅಷ್ಟು ಬೇಗ ಒಳ್ಳೆಯದಾಗುತ್ತದೆ. ಆತ್ಮವಿಕಾಸಕ್ಕಾಗಿ ಮಾಡತಕ್ಕ ಒಂದೇ ತುಣುಕು ಪ್ರಯತ್ನವು, ಇಂತಹ ಸಾವಿರಾರು ಅರ್ಥವಿಲ್ಲದ ಆಡಂಬರದ ಮಾತು

ಮತ್ತು ಭಾವಗಳಿಗಿಂತ ಉತ್ತಮವಾದುದು. ಅಂತಹ ಅಜ್ಞಾನ ಮತ್ತು ಭ್ರಾಂತಿಯಿಂದ ಬೆಳೆದ ಒಬ್ಬ ಆತ್ಮಶಕ್ತಿಯು ಮಹನೀಯನನ್ನು ನಮಗೆ ತೋರಿಸಿ. ಇಲ್ಲವಾದರೆ ಬಾಯಿ ಮುಚ್ಚಿಕೊಂಡು, ನಿಮ್ಮ ಹೃದಯದ ಕಿಟಕಿಯನ್ನು ತೆರೆದು ಸತ್ಯದ ಬೆಳಕನ್ನು ಒಳಕ್ಕೆ ಬಿಟ್ಟು ತಾವು ಮಾತ ನಾಡುತ್ತಿರುವ ವಿಷಯವೇನೆಂಬುದನ್ನು ತಿಳಿದಿರುವ–ಹಿಂದೂದೇಶದ ಋಷಿಗಳ ಪಾದತಲದಲ್ಲಿ ಕುಳಿತು ಕಲಿಯಿರಿ.

## ೪ ಗುರುವಿನ ಆವಶ್ಯಕತೆ

ಪ್ರತಿಯೊಂದು ಆತ್ಮವೂ ಪೂರ್ಣವೂ ದೋಷರಹಿತವೂ ಆಗುವುದು ಸಿದ್ಧ. ಪ್ರತಿಮನುಷ್ಯನೂ ಕಡೆಯಲ್ಲಿ ಪೂರ್ಣನಾಗುತ್ತಾನೆ. ನಾವು ಈಗ ಏನಾಗಿದ್ದೇವೋ ಅದು ನಮ್ಮ ಹಿಂದಿನ ಆಲೋಚನೆ ಮತ್ತು ಕರ್ಮ ಗಳ ಫಲ. ನಾವು ಮುಂದೆ ಏನಾಗುತ್ತೇವೋ ಅದು ನಮ್ಮ ಇಂದಿನ ಆಲೋಚನೆ ಮತ್ತು ಕರ್ಮಗಳ ಫಲ. ಆದರೆ ನಮ್ಮ ಅದೃಷ್ಟದ ನಿರ್ಣಯ ದಲ್ಲಿ ನಾವು ಹೊರಗಿನ ಸಹಾಯವನ್ನು ತೆಗೆದುಕೊಳ್ಳುವುದಕ್ಕೆ ಪ್ರತಿ ಬಂಧಕವಿಲ್ಲ. ಅಷ್ಟೇ ಅಲ್ಲ. ಅನೇಕ ಸಲ ಅಂತಹ ಸಹಾಯವು ಕೇವಲ ಆವಶ್ಯಕವೆ ಆಗಿದೆ. ಅಂತಹ ಸಹಾಯವು ಬಂದಾಗ ಆತ್ಮದ ಉಚ್ಚ ಶಕ್ತಿ ಗಳ ವಿಕಾಸವಾಗುತ್ತದೆ. ಆತ್ಮಕ್ಕೆ ಜಾಗ್ರತಿಯುಂಟಾಗುತ್ತದೆ. ಬೆಳ ವಣಿಗೆಯು ಕುದುರುತ್ತದೆ. ಕೊನೆಯಲ್ಲಿ ಮನುಷ್ಯನು ನಿರ್ದೋಷಿಯೂ ಪವಿತ್ರನೂ ಆಗುತ್ತಾನೆ.

ಅಂತಹ ವಿಕಾಸವುಂಟುಮಾಡುವ ಪ್ರವೃತ್ತಿಯು ಪುಸ್ತಕಗಳಿಂದ ಉಂಟಾಗಲಾರದು. ಆತ್ಮಕ್ಕೆ ಅಂತಹ ಪ್ರವೃತ್ತಿಯು ಮತ್ತೊಂದು ಆತ್ಮದಿಂದ ಮಾತ್ರವೇ ಬರಬಲ್ಲುದು. ನಮ್ಮ ಜೀವಮಾನವೆಲ್ಲಾ ನಾವು ಪುಸ್ತಕಗಳನ್ನು ವ್ಯಾಸಂಗಮಾಡಿ ಬಹಳ ಬುದ್ಧಿವಂತರಾಗಬಹುದು. ಆದರೆ ಅದು ನಮ್ಮ ಆತ್ಮದ ಶಕ್ತಿಗಳನ್ನು ವೃದ್ಧಿಪಡಿಸುವುದಿಲ್ಲ. ಹೆಚ್ಚಾದ ಬುದ್ಧಿಯ ವಿಕಾಸದ ಜತೆಯಲ್ಲಿ ಆತ್ಮವಿಕಾಸವೂ ಉಂಟಾಗುವುದೆಂಬುದು

ನಿಜವಲ್ಲ. ಗ್ರಂಥವ್ಯಾಸಂಗದಿಂದ ನಮ್ಮ ಆತ್ಮಕ್ಕೆ ಬಲವುಂಟಾಗಿದೆ ಯೆಂದು ಒಂದೊಂದು ಸಲ ನಾವು ಭ್ರಾಂತಿಯಿಂದ ಯೋಚಿಸಬಹುದು. ಆದರೆ ಅದರ ಫಲವನ್ನು ಚೆನ್ನಾಗಿ ವಿಮರ್ಶೆಮಾಡಿ ನೋಡಿದರೆ ನಮ್ಮ ಬುದ್ಧಿಗೆ ಲಾಭವಾಗಿದೆಯೇ ಹೊರತು ಆತ್ಮಕ್ಕೆ ಲಾಭವಾಗಿಲ್ಲವೆಂಬುದು ಗೊತ್ತಾಗುತ್ತದೆ. ನಾವುಗಳೆಲ್ಲಾ ಆತ್ಮದ ವಿಚಾರವು ಬಂದಾಗ ಅಷ್ಟು ಚೆನ್ನಾಗಿ ಮಾತನಾಡಬಲ್ಲೆವಾದರೂ, ಕಾರ್ಯತಃ ತೋರಿಸುವುದರಲ್ಲಿ ಕಷ್ಟವೂ ಆಭಾಸವೂ ಆಗುವುದೇ ಪುಸ್ತಕ ಜ್ಞಾನವು ಬರಿಯ ಟೊಳ್ಳು ಎಂಬುದಕ್ಕೆ ನಿದರ್ಶನವಾಗಿದೆ. ಆತ್ಮವನ್ನು ಚೇತನಗೊಳಿಸಲು ಸ್ಫೂರ್ತಿಯು ಮತ್ತೊಂದು ಆತ್ಮದಿಂದಲೇ ಬರಬೇಕು.

ಯಾವ ಮಹನೀಯನ ಆತ್ಮದಿಂದ ಈ ಸ್ಫೂರ್ತಿಯು ಹೊರಡು ತ್ತದೋ ಅವನಿಗೆ ಗುರು ಎಂದು ಹೆಸರು. ಯಾವನ ಆತ್ಮಕ್ಕೆ ಆ ಸ್ಫೂರ್ತಿಯು ಕೊಡಲ್ಪಡುತ್ತದೋ ಅವನೇ ಶಿಷ್ಯ ಅಥವಾ ವಿದ್ಯಾರ್ಥಿ. ಅಂತಹ ಸ್ಫೂರ್ತಿಯನ್ನು ಮತ್ತೊಂದು ಆತ್ಮಕ್ಕೆ ಉಂಟುಮಾಡಬೇಕಾ ದರೆ, ಯಾವ ಆತ್ಮದಿಂದ ಆ ಸ್ಫೂರ್ತಿಯು ಹೊರಡುತ್ತದೋ ಅದಕ್ಕೆ ತನ್ನ ಸ್ಫೂರ್ತಿಯನ್ನು ಹೊರಕ್ಕೆ ಕಳುಹಿಸುವ ಶಕ್ತಿಯಿರಬೇಕು. ಮತ್ತು ಯಾವ ಆತ್ಮಕ್ಕೆ ಅದು ಬರುತ್ತದೋ ಆ ಆತ್ಮವು ಅದನ್ನು ಸ್ವೀಕರಿಸಲು ಅರ್ಹವಾಗಿರಬೇಕು. ಬೀಜವು ಜೀವದ ಬೀಜವಾಗಿರಬೇಕು. ಜಮೀನು ಉತ್ತು ಸಿದ್ಧವಾಗಿರಬೇಕು. ಈ ಎರಡು ನಿಯಮಗಳೂ ಪೂರ್ತಿಯಾಗಿ ದ್ದರೆ ಆಶ್ಚರ್ಯಕರವಾದ ಧರ್ಮದ ಬೆಳವಣಿಗೆಯು ಉಂಟಾಗುವುದು. ಜ್ಞಾನಬೋಧಕನಾದ ಗುರುವು ಪ್ರಾಜ್ಞನಾಗಿರಬೇಕು. ಶಿಷ್ಯನು ಕುಶಲ ನಾಗಿರಬೇಕು. * ಹೀಗೆ ಅವರಿಬ್ಬರೂ ಅಸಾಧಾರಣರೂ ಮಹನೀಯರೂ ಆದಾಗ ಮಾತ್ರ ಅದರ ಫಲವಾಗಿ ನಿಜವಾದ ಆತ್ಮವಿಕಾಸವುಂಟಾಗು ತ್ತದೆ. ಇಲ್ಲದಿದ್ದರೆ ಆಗುವುದಿಲ್ಲ. ನಿಜವಾದ ಗುರುಗಳೆಂದರೆ ಹಾಗೆ ಇರು ತ್ತಾರೆ. ಆತ್ಮಜ್ಞಾನಾರ್ಜನೆಯ ಶಿಷ್ಯರೂ ಹಾಗೆಯೇ ಇರುತ್ತಾರೆ. ಉಳಿ ದವರೆಲ್ಲಾ ಆತ್ಮಜ್ಞಾನದ ಜತೆಯಲ್ಲಿ ಆಟವಾಡುವವರು. ಅವರಿಗೆ ಆತ್ಮ

---

* ಆಶ್ಚರ್ಯೋವಕ್ತಾ ಕುಶಲೋಽಸ್ಯಲಬ್ಧಾ (ಕಠ ೧-೨-೭)

ಜ್ಞಾನದ ವಿಷಯಕ್ಕೆ ಸ್ವಲ್ಪ ಕುತೂಹಲವೂ ಸ್ವಲ್ಪ ಬುದ್ಧಿಪ್ರೇರಣೆಯೂ ಇರಬಹುದು. ಆದರೆ ಅವರು ಕೇವಲ ಧರ್ಮದ ಹೊರ ಆವರಣದಲ್ಲಿಯೇ ನಿಂತಿರುತ್ತಾರೆ. ಅದರಲ್ಲೂ ಸ್ವಲ್ಪ ಬೆಲೆಯಿದೆ ಎಂಬುದರಲ್ಲಿ ಏನೂ ಸಂದೇಹವಿಲ್ಲ. ಯಾಕೆಂದರೆ ಸ್ವಲ್ಪ ಕಾಲದೊಳಗೆ ಅದು ಧರ್ಮಕ್ಕೆ ಸಾಧಕವಾದ ಬಾಯಾರಿಕೆಯನ್ನು ಅವರಲ್ಲಿ ಉಂಟುಮಾಡಬಹುದು. ಜಮೀನು ಉತ್ತು ಹದವಾದಕೂಡಲೆ ಬೀಜವು ಅದಕ್ಕೆ ಬೀಳುವುದು ಪ್ರಕೃತಿಯ ಗೂಢವಾದ ನಿಯಮಗಳಲ್ಲಿ ಒಂದಾಗಿದೆ. ಹಾಗೆಯೇ ಮನಸ್ಸಿಗೆ ಆತ್ಮಜ್ಞಾನದ ಮತ್ತು ಧರ್ಮದ ಆಸೆಯು ಪೂರ್ಣವಾಗಿ ಶ್ರದ್ಧಾಪೂರ್ವಕವಾಗಿ ಉಂಟಾದಕೂಡಲೇ ಆ ಧರ್ಮವನ್ನು ಸ್ಫೂರ್ತಿಗೊಳಿಸುವವನು ಬಂದೇಬರುತ್ತಾನೆ. ಧರ್ಮದ ಬೆಳಕನ್ನು ಸ್ವೀಕರಿಸುವ ಆತ್ಮವು ಪೂರ್ಣವೂ ಶಕ್ತವೂ ಆದಕೂಡಲೇ, ಅದರಿಂದ ಆಕರ್ಷಿತವಾಗಿ ಅದಕ್ಕೆ ಬೆಳಕನ್ನು ಕೊಡುವ ಆತ್ಮವು ಸ್ವಾಭಾವಿಕವಾಗಿಯೇ ಅದರ ಸಮೀಪಕ್ಕೆ ಬರುತ್ತದೆ.

ಆದರೆ ದಾರಿಯಲ್ಲಿ ಕೆಲವು ಅಪಾಯಗಳಿವೆ. ಉದಾಹರಣೆಗಾಗಿ ಬೆಳಕನ್ನು ಸ್ವೀಕರಿಸುವ ಆತ್ಮವು, ಕ್ಷಣಿಕವಾದ ಭಾವಗಳೇ ನಿಜವಾದ ಧರ್ಮದ ಹುಚ್ಚು ಎಂದು ತಿಳಿದುಕೊಳ್ಳುವ ಅಪಾಯಕ್ಕೆ ಒಳಗಾಗಬಹುದು. ಈ ವಿಷಯವನ್ನು ನಮ್ಮಲ್ಲೇ ನಾವು ಪರೀಕ್ಷಿಸಿಕೊಂಡು ನಿಜವನ್ನು ತಿಳಿದುಕೊಳ್ಳಬಹುದು. ನಮ್ಮ ಜೀವನದಲ್ಲಿ ಅನೇಕ ವೇಳೆ ನಮ್ಮ ಪ್ರೀತಿಗೆ ಪಾತ್ರರಾದವರು ಯಾರಾದರೂ ಸತ್ತರೆ ನಮಗೆ ಒಳ್ಳೆ ಏಟು ಬೀಳುತ್ತದೆ. ಆಗ ಪ್ರಪಂಚವು ಕ್ಷಣಿಕವಾದುದು. ನಮ್ಮ ಬೆರಳುಗಳ ಸಂದಿಯಲ್ಲಿ ಅದು ನುಸಿದುಕೊಂಡು ಹೋಗುತ್ತದೆ. ಇದಕ್ಕಿಂತಲೂ ಉತ್ತಮವಾದುದೂ ಹೆಚ್ಚು ಸ್ಪಷ್ಟವಾದುದೂ ಬೇಕೆನಿಸುತ್ತದೆ. ಅಂದರೆ ನಾವೂ ಧರ್ಮದ ಅನುಯಾಯಿಗಳಾಗಬೇಕೆಂದು ಎನಿಸುತ್ತದೆ. ಆದರೆ ಕೆಲವು ದಿವಸಗಳನಂತರ ಆ ಭಾವಗಳ ಪ್ರವಾಹವು ಹರಿದುಹೋದಮೇಲೆ ನಾವು ಮೊದಲು ಎಲ್ಲಿ ಇದ್ದೆವೋ ಅಲ್ಲೇ ಉಳಿದಿರುತ್ತೇವೆ. ಅನೇಕ ವೇಳೆ ಇಂತಹ ಭಾವಗಳು ನಿಜವಾದ ಧರ್ಮದಾಹವೆಂದು ನಾವು ತಪ್ಪು

ತಿಳಿದುಕೊಳ್ಳುತ್ತೇವೆ. ಆದರೆ ಎಲ್ಲಿಯವರೆಗೆ ನಾವು ಈ ಕ್ಷಣಿಕವಾದ ಭಾವಗಳನ್ನು ಸರಿಯಾಗಿ ತಿಳಿದುಕೊಳ್ಳುವುದಿಲ್ಲವೋ, ಎಲ್ಲಿಯವರೆಗೆ ನಮಗೆ ಧರ್ಮದ ಮೇಲಿನ ಆಸೆಯೂ ದಾಹವೂ ಒಂದೇಸಮನಾಗಿ ಶಾಶ್ವತವಾಗಿರುವುದಿಲ್ಲವೋ ಅಲ್ಲಿಯವರೆಗೆ ನಮಗೆ ನಿಜವಾದ ಸ್ಫೂರ್ತಿಯನ್ನು ಕೊಡುವ ಗುರುವು ದೊರೆಯುವುದಿಲ್ಲ. ಆದುದರಿಂದ ಆತ್ಮನನ್ನು ಹುಡುಕುತ್ತಿರುವ ನಮ್ಮ ಪ್ರಯತ್ನವು ವ್ಯರ್ಥವಾಗುತ್ತಿದೆಯೆಂದು ನಾವು ಆಕ್ಷೇಪಣೆ ಮಾಡುವಾಗಲೆಲ್ಲಾ, ಹಾಗೆ ಮಾಡುವುದಕ್ಕೆ ಮುಂಚೆ, ಆತ್ಮದ ಅನ್ವೇಷಣದಲ್ಲಿ ನಮ್ಮ ಹೃದಯವು ಪೂರ್ಣವಾಗಿ ಇದೆಯೇ ಎಂದು ನಮ್ಮನ್ನು ನಾವು ಮೊದಲು ಪರೀಕ್ಷಿಸಿಕೊಳ್ಳಬೇಕು. ಆಗ ನಮ್ಮಲ್ಲಿ ಬಹುಸಂಖ್ಯಾಕರು ಸತ್ಯವನ್ನು ಸ್ವೀಕರಿಸಲು ಅರ್ಹರೂ ಸಿದ್ಧರೂ ಆಗಿರಲಿಲ್ಲವೆಂದೂ, ಆತ್ಮಜ್ಞಾನದ ಮೇಲೆ ಅವರಿಗೆ ನಿಜವಾದ ಶ್ರದ್ಧೆ ಇರಲಿಲ್ಲವೆಂದೂ ಗೊತ್ತಾಗುವುದು.

ಈ ಸ್ಫೂರ್ತಿಯನ್ನು ಶಿಷ್ಯನಿಗೆ ಕೊಡತಕ್ಕ ಗುರುವಿಗೆ ಇನ್ನೂ ಹೆಚ್ಚಿನ ಅಪಾಯಗಳಿವೆ. ಅನೇಕರು ತಾವು ಅಜ್ಞಾನದಲ್ಲಿ ಮುಳುಗಿದ್ದರೂ ತಮಗೆ ಎಲ್ಲಾ ಗೊತ್ತಿದೆಯೆಂದುಕೊಳ್ಳುತ್ತಾರೆ. ಅಷ್ಟೇ ಅಲ್ಲ. ಇತರರನ್ನೂ ಆತ್ಮಜ್ಞಾನದ ದಾರಿಯಲ್ಲಿ ಕರೆದುಕೊಂಡು ಹೋಗಲೂ ಪ್ರಯತ್ನಿಸುತ್ತಾರೆ. ಇದರಿಂದ ಕುರುಡರು ಕುರುಡರಿಗೆ ದಾರಿತೋರಿಸಿದಂತಾಗಿ ಇಬ್ಬರೂ ಹಳ್ಳಕ್ಕೆ ಬೀಳುತ್ತಾರೆ.

ಅವಿದ್ಯಾಯಾಮಂತರೆ ವರ್ತಮಾನಾಃ ಸ್ವಯಂಧೀರಾಃ ಪಂಡಿತಂ ಮನ್ಯಮಾನಾಃ
ಜಂಗಂಧಮಾನಾಃ ಪರಿಯಂತಿ ಮೂಢಾ ಅಂಧೇನೈವನೀಯಮಾನಾಯಥಾಂಧಾಃ

(ಮುಂಡಕ ೧–೨–೮)

ಪ್ರಪಂಚವು ಅಂಥವರಿಂದ ತುಂಬಿದೆ. ಪ್ರತಿ ಒಬ್ಬನೂ ಗುರುವಾಗಲು ಅಪೇಕ್ಷಿಸುತ್ತಾನೆ. ತಿರುಕರೆಲ್ಲಾ ಕೋಟ್ಯಾಂತರ ರೂಪಾಯಿ ದಾನಮಾಡಲು ಅಪೇಕ್ಷೆಪಡುತ್ತಾರೆ. ಅಂತಹ ತಿರುಕರು ಹಾಸ್ಯಾಸ್ಪದರಾಗುವಂತೆ ಅಂತಹ ಗುರುಗಳು ಹಾಸ್ಯಾಸ್ಪದರಾಗುತ್ತಾರೆ.

# ೫ ಗುರುವಿನ ಮತ್ತು ಶಿಷ್ಯನ ಯೋಗ್ಯತೆಗಳು

ಹಾಗಾದರೆ ಗುರುವನ್ನು ತಿಳಿಯುವುದು ಹೇಗೆ? ಸೂರ್ಯನನ್ನು ನಮ್ಮ ಕಣ್ಣಿಗೆ ಕಾಣಿಸಲು ದೀಪವು ಬೇಕಿಲ್ಲ. ಅವನನ್ನು ನೋಡಲು ನಾವು ದೀಪವನ್ನು ಹತ್ತಿಸಬೇಕಾದುದಿಲ್ಲ ಎಂಬುದೇ ಅದಕ್ಕೆ ಉತ್ತರ. ಸೂರ್ಯನು ಹುಟ್ಟಿದ ಕೂಡಲೆ ನಮಗೆ ಸ್ವಾಭಾವಿಕವಾಗಿ ಆ ವಿಷಯವು ತತ್‌ಕ್ಷಣ ಗೊತ್ತಾಗುತ್ತದೆ. ಹಾಗೆಯೆ ಗುರುವು ಬಂದಕೂಡಲೆ ಸತ್ಯದ ಪ್ರಕಾಶವು ತನ್ನಮೇಲೆ ಬಿದ್ದಿತೆಂದು ಆತ್ಮನಿಗೆ ಗೊತ್ತಾಗುತ್ತದೆ. ಸತ್ಯವು ತನ್ನ ಸಾಕ್ಷ್ಯದ ಮೇಲೆಯೆ ನಿಂತುಕೊಳ್ಳುತ್ತದೆ. ಅದಕ್ಕೆ ಬೇರೆ ಸಾಕ್ಷ್ಯದ ಅವಶ್ಯಕತೆಯಿಲ್ಲ. ಯಾಕೆಂದರೆ ಅದು ಸ್ವಯಂಪ್ರಕಾಶ ಮಾನವಾದುದು. ಅದು ಪೂರ್ಣವಾಗಿ ನಮ್ಮ ಸ್ವಭಾವದ ಒಳಕ್ಕೆ ಪ್ರವೇಶಿಸುತ್ತದೆ. ಆದರ ಎದುರಿಗೆ ಬ್ರಹ್ಮಾಂಡವೆಲ್ಲವೂ ಎದ್ದು ನಿಂತು ಇದೇ ಸತ್ಯ ಎಂಬುದಾಗಿ ಕೂಗುತ್ತದೆ. ಜ್ಞಾನದಿಂದಲೂ ಜ್ಯೋತಿಯಿಂದಲೂ ಸೂರ್ಯನೋಪಾದಿಯಲ್ಲಿ ಪ್ರಕಾಶಿಸುತ್ತಿರುವ ಜಗತ್ತಿನ ಉತ್ತಮರಾದ ಗುರುಗಳನ್ನು ಪ್ರಪಂಚವು ದೇವರನ್ನು ಪೂಜಿಸಿದಂತೆ ಪೂಜಿಸುತ್ತದೆ. ಆದರೆ ನಾವು ಇನ್ನೂ ಸ್ವಲ್ಪ ಕಡಿಮೆ ತರಗತಿಯ ಗುರುಗಳಿಂದಲೂ ಸಹ ಸಹಾಯವನ್ನು ಹೊಂದಬಹುದು. ಆದರೆ ನಮಗೆ ಜ್ಞಾನವನ್ನು ಬೋಧಿಸತಕ್ಕವನ ಯೋಗ್ಯತೆಯನ್ನು ತಿಳಿದುಕೊಳ್ಳಲು ನಮಗೆ ಸ್ವಾಭಾವಿಕವಾಗಿ ಕಷ್ಟವಾಗುವುದರಿಂದ, ಶಿಷ್ಯನಿಗೆ ಇರುವಂತೆಯೇ ಗುರುವಿಗೂ ಕೆಲವು ಪರೀಕ್ಷೆಗಳೂ ನಿಯಮಗಳೂ ಆವಶ್ಯಕವಾಗಿವೆ.

ಶಿಷ್ಯನಿಗೆ ಆವಶ್ಯಕವಾದ ನಿಯಮಗಳು ಯಾವುವೆಂದರೆ ಪಾರಿಶುದ್ಧ್ಯ, ಜ್ಞಾನವನ್ನು ಸಂಪಾದಿಸಬೇಕೆಂಬ ತೀವ್ರವಾದ ಆಸಕ್ತಿ ಮತ್ತು ಹಿಡಿದುದನ್ನು ಬಿಡದೆ ಮಾಡುವ ಪ್ರಯತ್ನ. ಅಶುದ್ಧವಾದ ಯಾವ ಆತ್ಮವೂ ನಿಜವಾಗಿಯೂ ಧಾರ್ಮಿಕವಾಗಲಾರದು. ಧರ್ಮದ ಅನುಯಾಯಿಯಾಗಬೇಕಾದರೆ ಮಾತು, ಯೋಚನೆ, ಕೆಲಸ ಇವುಗಳಲ್ಲಿ ಪರಿಶುದ್ಧನಾಗಿರಬೇಕಾದುದು ಆವಶ್ಯಕ. ಮತ್ತು ಅವನಿಗೆ ಜ್ಞಾನದ

ದಾಹವಂತೂ ಇರಲೇ ಬೇಕು. ಯಾಕೆಂದರೆ ನಾವು ಯಾವುದಕ್ಕಾಗಿ ಆಸೆಪಡುತ್ತೇವೋ, ಯಾವುದರ ಮೇಲೆ ಮನಸ್ಸಿಡುತ್ತೇವೆಯೋ ನಮಗೆ ಅದೇ ದೊರೆಯುವುದೂ ಮತ್ತಾವುದೂ ದೊರೆಯದಿರುವುದೂ ಸ್ವಾಭಾವಿಕವಾಗಿದೆ. ಧರ್ಮದ ಮೇಲೆ ನಿಜವಾದ ತೃಷ್ಣೆಯುಂಟಾಗತಕ್ಕುದು ಬಹಳ ಅಪರೂಪ. ನಾವು ಸಾಧಾರಣವಾಗಿ ಊಹಿಸುವಷ್ಟು ಸುಲಭವಾಗಿ ಅದು ಉಂಟಾಗುವುದಿಲ್ಲ. ಧರ್ಮದ ಮೇಲಿನ ವ್ಯಾಖ್ಯಾನಗಳನ್ನು ಕೇಳುವುದೂ ಧರ್ಮ ಗ್ರಂಥಗಳನ್ನು ಓದುವುದೂ, ಧರ್ಮತೃಷ್ಣೆಯಿರುವುದಕ್ಕೆ ಗುರುತಲ್ಲ. ಆ ತೃಷ್ಣೆಯು ನಮಗೆ ಉಂಟಾಗುವುದಕ್ಕೆ ಮುಂಚೆ ನಾವು ನಮ್ಮ ಹೀನ ಮನೋವೃತ್ತಿಗಳೊಂದಿಗೆ ಒಂದೆಸಮವಾಗಿ ಜಿಡದೆ ಹೊಡದಾಡಬೇಕಾಗುವುದು. ಅದು ಒಂದೆರಡು ದಿನ ಅಥವಾ ವರ್ಷಗಳ ಹೋರಾಟವಲ್ಲ. ಅದು ಪೂರ್ಣವಾಗಿ ಒಂದು ಜೀವಮಾನದ ಹೋರಾಟವೇ ಆಗಬಹುದು. ಅಥವಾ ನೂರಾರು ಜೀವಮಾನಗಳ ವರೆಗೆ ಈ ಹೋರಾಟವು ನಡೆಯುತ್ತಲೇ ಇರಬಹುದು. ಕೆಲವು ಸಂದರ್ಭಗಳಲ್ಲಿ ಜಯವು ತತ್‌ಕ್ಷಣ ಉಂಟಾಗಬಹುದು. ಆದರೆ ಅನೇಕ ವೇಳೆ ಜಯಕ್ಕಾಗಿ ಅಸಂಖ್ಯಾತವೆಂದು ತೋರುವಷ್ಟು ವರುಷಗಳು ಕಾಯಬೇಕಾಗಬಹುದು. ಈ ವಿಧವಾದ ಹಿಡಿದ ಕೆಲಸವನ್ನು ಬಿಡದ ಮನೋಭಾವದಿಂದ ಹೊರಡುವ ವಿದ್ಯಾರ್ಥಿಗೆ ಖಂಡಿತವಾಗಿಯೂ ಕೊನೆಯಲ್ಲಿ ಜಯವು ಸಿಕ್ಕುವುದು.

ಗುರುವಿಗೆ ವೇದಗಳ ತಿರುಳು ತಿಳಿದಿದೆಯೋ ಎಂಬುದನ್ನು ನೋಡಬೇಕು. ಮಾನವ ಪ್ರಪಂಚವೆಲ್ಲ ಬೈಬಲ್, ವೇದಗಳು, ಕುರಾನ್ ಇವುಗಳನ್ನು ಓದುತ್ತದೆ. ಆದರೆ ಅದು ಓದುವುದು ಅದರಲ್ಲಿರುವ ಪದಗಳು, ಮಾತುಗಳು, ವ್ಯಾಕರಣ ಮತ್ತು ಭಾಷಾಶಾಸ್ತ್ರ ಅಂದರೆ ಧರ್ಮದ ಒಣಗಿದ ಮೂಳೆಗಳು. ವೇದಗಳ ತಿರುಳಿನ ಜ್ಞಾನವೇ ಗುರುವಿನ ಗುರುತ್ವಕ್ಕೆ ಮುಖ್ಯವಾದುದು. ವೇದಗಳಲ್ಲಿರುವ ಪದಗಳು ದೊಡ್ಡ ಕಾಡಿನಂತಿವೆ. ಮನಸ್ಸು ಅದರಲ್ಲಿ ದಾರಿತಪ್ಪಿ ತಿರುಗಾಡುತ್ತದೆ.* ವಾಗ್ವೈಖರಿಯೂ

* ಶಬ್ದಜಾಲಂ ಮಹಾರಣ್ಯಂ ಚಿತ್ತಭ್ರಮಣಕಾರಣಂ (ವಿವೇಕಚೂಡಾಮಣಿ)

ಶಬ್ದಾಡಂಬರವೂ ವಿದ್ವಾಂಸರ ವಾಗ್ವಾದವೂ ಬುದ್ಧಿಗೆ ಸಂತೋಷವನ್ನು ಉಂಟುಮಾಡುತ್ತದೆಯೇ ಹೊರತು ಮುಕ್ತಿಗೆ ಸಾಧಕವಾಗುವುದಿಲ್ಲ. ‡ ಇತರರಿಗೆ ಧರ್ಮವನ್ನು ಬೋಧಿಸಲು ಈ ದಾರಿಯನ್ನು ಅನುಸರಿಸುವವರು ಜನರಿಂದ ಪಂಡಿತರೆಂದು ಹೊಗಳಿಸಿಕೊಳ್ಳುವುದಕ್ಕಾಗಿ ತಮ್ಮ ಪುಸ್ತಕ ಪಾಂಡಿತ್ಯವನ್ನು ಪ್ರದರ್ಶಿಸುತ್ತಾರೆ. ಪ್ರಪಂಚದ ದೊಡ್ಡ ಗುರುಗಳಾರೂ ಶಬ್ದಗಳನ್ನು ಕಿರಿಚಿ ಹಿಂಸಿಸಿ ಅವುಗಳ ಅರ್ಥವನ್ನೂ ಮೂಲವನ್ನೂ ಕುರಿತು ಚರ್ಚಿಸುವುದರಲ್ಲಿ ತೊಡಗಿರಲಿಲ್ಲವೆಂದು ನಿಮಗೆ ಗೊತ್ತಾಗುತ್ತದೆ. ಅವರು ಆ ವೇದಗಳ ತಿರುಳನ್ನು ಮಾತ್ರ ಜನರಿಗೆ ಬೋಧಿಸಿದರು. ಆದರೆ ಬೋಧಿಸುವುದಕ್ಕೆ ಏನೂ ತಿಳಿಯದೆ ಇದ್ದ ಇತರರು ಅವುಗಳಿಂದ ಇಲ್ಲೊಂದು ಅಲ್ಲೊಂದು ಪದವನ್ನು ತೆಗೆದುಕೊಂಡು ಆ ಪದದ ಮೂಲ, ಅದನ್ನು ಮೊದಲು ಉಪಯೋಗಿಸಿದವನು, ಅವನು ತಿನ್ನುವುದಕ್ಕೆ ಅಭ್ಯಾಸ ಮಾಡಿಕೊಂಡಿದ್ದ ಆಹಾರ, ಅವನು ಮಲಗುತ್ತಿದ್ದ ಒಟ್ಟು ಕಾಲ ಮುಂತಾದ ವಿಚಾರಗಳ ಮೇಲೆ ಮೂರು ನಾಲ್ಕು ಪುಸ್ತಕಗಳನ್ನು ಬರೆದಿದ್ದಾರೆ.

ರಾಮಕೃಷ್ಣ ಪರಮಹಂಸರು ಒಂದು ಕಥೆಯನ್ನು ಹೇಳುತ್ತಿದ್ದರು. ಕೆಲವು ಜನರು ಮಾವಿನ ತೋಪಿಗೆ ಹೋಗಿ ಮರಗಳ ಎಲೆಗಳು, ಕೊಂಬೆಗಳು, ಬೇರುಗಳು ಇವುಗಳನ್ನು ಲೆಕ್ಕಮಾಡಿ ಅವುಗಳ ಬಣ್ಣ, ಆಕಾರ ಮುಂತಾದ ವಿಚಾರಗಳನ್ನೆಲ್ಲಾ ಸ್ವಲ್ಪವೂ ಬಿಡದೆ ಬರೆದುಕೊಂಡು ಬಹಳ ಪ್ರೌಢವಾದ ಚರ್ಚೆಗೆ ಆರಂಭಿಸಿದರಂತೆ. ಆ ಚರ್ಚೆಗಳು ಅವರಿಗೇನೋ ಹಿತವಾಗಿಯೇ ಇದ್ದುವು. ಆದರೆ ಅವರಲ್ಲಿ ಬುದ್ಧಿವಂತನಾದ ಒಬ್ಬನು ಚರ್ಚೆಗಳಲ್ಲಿ ಭಾಗವಹಿಸದೆ ಹಣ್ಣನ್ನು ತಿನ್ನಲು ಮೊದಲುಮಾಡಿದನಂತೆ. ಅವರ ಪೈಕಿ ಅವನೆ ಬುದ್ಧಿವಂತನಲ್ಲವೆ? ಹಾಗೆ ಎಲೆ ಎಣಿಸುವುದೇ ಮುಂತಾದ ಕೆಲಸಗಳನ್ನು ಇತರರಿಗೆ ಬಿಟ್ಟುಬಿಡಿ. ಅಂತಹ ಕೆಲಸಗಳಿಗೂ

---

‡ ವಾಗ್ವೈಖರಿ ಶಬ್ದಝರಿ ಶಾಸ್ತ್ರವ್ಯಾಖ್ಯಾನ ಕೌಶಲಂ
ವೈದುಷ್ಯಂ ವಿದುಷಾಂ ತದ್ವದ್ಭುಕ್ತಯೆ ನ ತು ಮುಕ್ತಯೇ
(ವಿವೇಕಚೂಡಾಮಣಿ ೬೦)

ಒಂದು ಸ್ಥಾನವುಂಟು. ಆದರೆ ಆತ್ಮದ ಪ್ರಪಂಚದಲ್ಲಿ ಅವುಗಳ ಆವಶ್ಯಕತೆ ಇಲ್ಲ. ಇಂತಹ ಎಲೆ ಎಣಿಸುವವರಲ್ಲಿ ಆತ್ಮಜ್ಞಾನಿಯು ನಮಗೆ ದೊರಕುವುದಿಲ್ಲ. ಮನುಷ್ಯ ಜೀವನದ ಅತ್ಯುತ್ತಮ ಗುರಿಯಾದ ಧರ್ಮಸಂಪಾದನೆಗೆ ಆ ಬಗೆಯ ಸಾಧನೆಯು ಆವಶ್ಯಕವಿಲ್ಲ. ನೀವು ನಿಜವಾದ ಭಕ್ತರಾಗಬೇಕಾದರೆ ಕೃಷ್ಣನು ಮಥುರೆಯಲ್ಲಿ ಹುಟ್ಟಿದನೋ ಅಥವಾ ವ್ರಜದಲ್ಲಿ ಹುಟ್ಟಿದನೋ ಎಂಬುದನ್ನೂ ಅವನು ತನ್ನ ಜೀವಮಾನವನ್ನೆಲ್ಲಾ ಎಲ್ಲಿ ಕಳೆದನೆನ್ನುವುದನ್ನೂ ಅಥವಾ ಅವನು ಗೀತೆಯನ್ನು ಉಪದೇಶ ಮಾಡಿದ ಸರಿಯಾದ ತಿಥಿವಾರನಕ್ಷತ್ರಗಳನ್ನೂ ತಿಳಿಯಬೇಕಾದುದು ಆವಶ್ಯಕವಿಲ್ಲ. ನಿಮಗೆ ಬೇಕಾಗಿರುವುದು ಗೀತೆಯು ಉಪದೇಶಿಸುವ ಕರ್ತವ್ಯ ಮತ್ತು ಪ್ರೇಮದ ತತ್ವಗಳನ್ನು ನಿಮ್ಮ ನಿತ್ಯ ಜೀವನದಲ್ಲಿ ಆಚರಣೆಗೆ ತರುವ ಮಹತ್ತಾದ ಆಸೆ ಮಾತ್ರ. ಗೀತೆಯು ಕರ್ತೃವಿನ ಮತ್ತು ಗೀತೆಯ ಮೇಲಿನ ಇತರ ವಿಷಯಗಳು ಪಂಡಿತರ ಸಂತೋಷಕ್ಕಾಗಿ. ಅವರಿಗೆ ಬೇಕಾದುದನ್ನು ಅವರು ತೆಗೆದುಕೊಳ್ಳಲಿ. ಅವರ ಪಾಂಡಿತ್ಯದ ಚರ್ಚೆಗಳಿಗೆಲ್ಲಾ ಶಾಂತಿ ಶಾಂತಿ ಎಂದು ಹೇಳಿ ನಾವು ಮಾವಿನಹಣ್ಣುಗಳನ್ನು ತಿನ್ನೋಣ.

ಗುರುವಿಗೆ ಇರಬೇಕಾದ ಎರಡನೆಯ ಗುಣವು ಪಾಪರಹಿತನಾಗಿರುವುದು. ನಾವು ಗುರುವಿನ ಗುಣಯೋಗ್ಯತೆಗಳನ್ನು ಯಾಕೆ ನೋಡಬೇಕು? ಅವನು ಏನು ಹೇಳುತ್ತಾನೊ ನಮಗೆ ಅದು ಮುಖ್ಯವಾದುದು. ಅದನ್ನು ತೆಗೆದುಕೊಳ್ಳೋಣ ಎಂಬುದಾಗಿ ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಒಬ್ಬ ಮನುಷ್ಯನು ನನಗೆ ರಸಾಯನಶಾಸ್ತ್ರ, ಭೌತಶಾಸ್ತ್ರ ಅಥವ ಮತ್ತಾವುದಾದರೂ ವಿಜ್ಞಾನಶಾಸ್ತ್ರವನ್ನು ಕಲಿಸಲು ಇಷ್ಟಪಟ್ಟರೆ, ಅವನು ಹೇಗಿದ್ದರೂ ನನಗೆ ಚಿಂತೆಯಿಲ್ಲ. ಆದರೆ ಆತ್ಮದ ವಿದ್ಯೆದಲ್ಲಿ ಹಾಗಾಗುವುದಿಲ್ಲ. ಯಾಕೆಂದರೆ ಅಶುದ್ಧವಾಗಿರತಕ್ಕ ಆತ್ಮದಲ್ಲಿ ಬ್ರಹ್ಮಜ್ಞಾನವು ತುಂಬಿರುವುದು ಸಾಧ್ಯವಲ್ಲ. ಅಶುದ್ಧನಾದ ಮನುಷ್ಯನು ಯಾವ ಧರ್ಮವನ್ನು ತಾನೆ ಉಪದೇಶಿಸಬಲ್ಲನು? ಆತ್ಮಜ್ಞಾನವನ್ನು ಸಂಪಾದಿಸಿ ಅದನ್ನು ಇತರರಿಗೆ ಬೋಧಿಸುವವನಲ್ಲಿರಬೇಕಾದ ಮುಖ್ಯವಾದ ಗುಣವು ಹೃದಯದ ಮತ್ತು ಆತ್ಮದ ಪಾರಿಶುದ್ಧ್ಯ. ದೇವರನ್ನು

ಕುರಿತ ದಿವ್ಯದೃಷ್ಟಿಯು ಆತ್ಮವು ಪರಿಶುದ್ಧವಾಗುವವರೆಗೆ ಎಂದಿಗೂ ಉಂಟಾಗುವುದಿಲ್ಲ. ಆದುದರಿಂದ ಧರ್ಮಬೋಧಕನಾದ ಗುರುವಾಗುವವನನ್ನು ಮೊದಲು ಅವನು ಹೇಗಿದ್ದಾನೆ ಎಂಬುದಾಗಿ ನೋಡಿ ಅನಂತರ ಅವನು ಏನು ಹೇಳುತ್ತಾನೆ ಎಂಬುದನ್ನು ನೋಡಬೇಕು. ಅವನ ಮಾತುಗಳಿಗೆ ಬೆಲೆಯುಂಟಾಗಬೇಕಾದರೆ, ನಿಜವಾದ ಆತ್ಮಜ್ಞಾನವು ಅವನಿಂದ ಇತರರಿಗೆ ಬರಬೇಕಾದರೆ ಅವನು ಪೂರ್ಣವಾಗಿ ಪರಿಶುದ್ಧನಾಗಿರಬೇಕು. ಅವನಲ್ಲಿಯೇ ಸ್ವಜವಾದ ಆತ್ಮತೇಜಸ್ಸು ಇಲ್ಲದಿದ್ದರೆ ಅವನು ಏನನ್ನು ತಾನೆ ಇತರರಿಗೆ ಬೋಧಿಸಬಲ್ಲನು? ಶಿಷ್ಯನಿಗೆ ಬೋಧಿಸುವುದಕ್ಕೆ ಮುಂಚೆ ಗುರುವಿನ ಹೃದಯದಲ್ಲಿ ತೀವ್ರವಾದ ಆತ್ಮಜ್ಞಾನದ ಜ್ವಾಲೆಯು ಚಲನವಾಗಬೇಕು. ಗುರುವಿನ ಕೆಲಸವು ನಿಜವಾಗಿ ಹೊಸದೊಂದನ್ನು ಶಿಷ್ಯನಿಗೆ ಧಾರೆ ಎರೆಯುವುದು; ಸುಮ್ಮಗೆ ಶಿಷ್ಯನಲ್ಲಿರುವ ಬುದ್ಧಿಯನ್ನು ಮಾತ್ರ ವಿಕಾಸಗೊಳಿಸುವುದಲ್ಲ. ಯಾಕೆಂದರೆ ಗುರುವಿನಿಂದ ಶಿಷ್ಯನಿಗೆ ನಿಜವಾಗಿ ಶ್ಲಾಘ್ಯವಾದ ಒಂದು ವಿಧವಾದ ಪ್ರಭಾವವು ಬರುತ್ತದೆ. ಆದುದರಿಂದಲೇ ಗುರುವು ಪರಿಶುದ್ಧನಾಗಿರಬೇಕು.

ಮೂರನೆ ನಿಯಮವು ಉದ್ದೇಶಕ್ಕೆ ಸಂಬಂಧಪಟ್ಟುದು. ಗುರುವು ಹಣ ಪ್ರಸಿದ್ಧಿ ಮುಂತಾದ ಭೌತವಾದ ಲಾಭಕ್ಕಾಗಿ ಉಪದೇಶಮಾಡಕೂಡದು. ಅವನು ಸಮಸ್ತವಾದ ಪ್ರಪಂಚದಲ್ಲೂ ಪ್ರೀತಿಯಿಟ್ಟು ಆ ಪ್ರೇಮಕ್ಕಾಗಿಯೆ ಉಪದೇಶಮಾಡಬೇಕು. ಯಾಕೆಂದರೆ ಆತ್ಮವಿಕಾಸಜ್ಞಾನವನ್ನು ಪ್ರೇಮದಿಂದ ಮಾತ್ರವೇ ಒಬ್ಬರಿಂದ ಒಬ್ಬರಿಗೆ ಸಾಗಿಸಬಹುದು. ಹಣದ ಆಸೆ ಕೀರ್ತಿ ಮುಂತಾದ ಸ್ವಾರ್ಥಗಳು ಈ ವಿಶ್ವಪ್ರೇಮವನ್ನು ಕೂಡಲೆ ನಾಶಮಾಡಿಬಿಡುತ್ತವೆ. ದೇವರು ಪ್ರೇಮವೇ ಆಗಿದ್ದಾನೆ. ಪ್ರೇಮವೇ ದೇವರೆಂದು ಯಾರಿಗೆ ತಿಳಿದಿದೆಯೋ ಅವನು ಮಾತ್ರ ದೇವತ್ವವನ್ನು ಜನರಿಗೆ ಉಪದೇಶಿಸಬಲ್ಲ ಗುರುವಾಗಬಲ್ಲನು.

ಈ ಮೇಲಿನ ನಿಯಮಗಳಿಗೆ ಅನುಸಾರವಾಗಿ ನಿಮ್ಮ ಗುರುವು ಇದ್ದರೆ ನೀವು ಸುರಕ್ಷಿತವಾಗಿದ್ದೀರೆಂದು ತಿಳಿದುಕೊಳ್ಳಬಹುದು. ಹಾಗಿಲ್ಲದಿದ್ದರೆ ಅವನಿಂದ ನೀವು ಉಪದೇಶವನ್ನು ತೆಗೆದುಕೊಳ್ಳುವುದು ಕ್ಷೇಮವಲ್ಲ. ಯಾಕೆಂದರೆ ಗುರುವಿಗೇ ಆತ್ಮಜ್ಞಾನವಿಲ್ಲದಿದ್ದರೆ, ನಿಮ್ಮನ್ನೂ

ಅವನು ಪ್ರಾಪಂಚಿಕ ಆಸೆಗಳಿಂದ ತುಂಬುವನು. ಹೇಗಾದರೂ ಮಾಡಿ ಆ ಅಪಾಯವನ್ನು ನೀವು ತಪ್ಪಿಸಿಕೊಳ್ಳಬೇಕು. ಶ್ರೋತ್ರಿಯನೂ, ಕಾಮವನ್ನು ಜಯಿಸಿದವನೂ ಪರಿಶುದ್ಧನೂ ಆದವನು ಮಾತ್ರ ಬ್ರಹ್ಮಜ್ಞಾನಿ ಎಂದು ಉಕ್ತವಾಗಿದೆ. *

ಮೇಲೆ ಹೇಳಿದ ವಿಷಯಗಳಿಂದ ಧರ್ಮವನ್ನು ಪ್ರೀತಿಸಿ, ಅದರ ಸಾರವನ್ನು ತಿಳಿದು ನಮ್ಮ ಜೀವನದಲ್ಲಿ ಅದನ್ನು ಅನುಸರಿಸುವುದನ್ನು ಯಾರಿಂದ ಎಲ್ಲಿ ಬೇಕಾದರೂ ಕಲಿಯಲು ಸಾಧ್ಯವಿಲ್ಲವೆಂದಾಯಿತು. ಕಲ್ಲುಗಳಲ್ಲಿ ತತ್ವಗಳನ್ನೂ ಹರಿಯುವ ನದಿಗಳಲ್ಲಿ ಗ್ರಂಥಗಳನ್ನೂ ಎಲ್ಲಾ ವಸ್ತುಗಳಲ್ಲೂ ಒಳ್ಳೆಯದನ್ನೂ ಕಾಣುತ್ತೇವೆ ಎಂಬುದು ಕಾವ್ಯಭಾಷೆ. † ಆದರೆ ಯಾವ ಮನುಷ್ಯನು ಸತ್ಯವನ್ನು ತನ್ನಲ್ಲಿ ಬೆಳೆಸಿಕೊಂಡಿಲ್ಲವೊ ಅವನಿಗೆ ಇದಾವುದರಿಂದಲೂ ಸತ್ಯವು ದೊರೆಯಲಾರದು. ಕಲ್ಲುಗಳೂ ನದಿಗಳೂ ಯಾರಿಗೆ ತತ್ವಗಳನ್ನು ಕಲಿಸುತ್ತವೆ? ಯಾರ ಆತ್ಮಪೀಠದಲ್ಲಿರುವ ಕಮಲವು ಆಗಲೇ ಅರಳಿ ವಿಕಾಸವಾಗಿರುವುದೋ ಅವರಿಗೆ. ಇಂತಹ ಸುಂದರವಾದ ಕಮಲವು ವಿಕಾಸವಾಗುವಂತೆ ಮಾಡುವ ಬೆಳಕು ಯಾವಾಗಲೂ ಗುರುವಿನಿಂದಲೇ ಬರುತ್ತದೆ. ಈ ರೀತಿಯಾಗಿ ಹೃದಯವು ಮೊದಲು ವಿಕಾಸವಾದಮೇಲೆ ಅದು ಕಲ್ಲಿನಿಂದಲೂ ನದಿಗಳಿಂದಲೂ ನಕ್ಷತ್ರಗಳಿಂದಲೂ ಸೂರ್ಯ ಚಂದ್ರರೇ ಮೊದಲಾದ ಪ್ರಪಂಚದ ಎಲ್ಲಾ ವಸ್ತುಗಳಿಂದಲೂ ತತ್ವವನ್ನು ಸ್ವೀಕರಿಸಲು ಅರ್ಹವಾದ ಸ್ಥಿತಿಗೆ ಬರುತ್ತದೆ. ಆದರೆ ಹಾಗೆ ವಿಕಾಸವಾಗದೆ ಇರುವ ಹೃದಯಕ್ಕೆ ಅವುಗಳಲ್ಲಿ ಬರಿ ಕಲ್ಲು, ನೀರು ಇವುಗಳ ಹೊರತು ಮತ್ತೇನೂ ಕಾಣುವುದಿಲ್ಲ. ಕುರುಡನು ಸರ್ವ ವಸ್ತು ಸಂಗ್ರಹಾಲಯಕ್ಕೆ ಹೋಗಬಹುದು. ಆದರೆ

---

* ಶ್ರೋತ್ರಿಯೋಽವೃಜಿನೋಽಕಾಮಹತೋ ಯೋ ಬ್ರಹ್ಮವಿತ್ತಮಃ

(ವಿವೇಕಚೂಡಾಮಣಿ ೩೪)

† And this one life exempt from public haunt finds tongues in trees, books in the running brooks, Sermons in stones and good in every-thing.

Shakespere–"As you like it" Act 2 Scene I

ಅವನಿಗೆ ಅದರಿಂದ ಯಾವ ವಿಧದಲ್ಲೂ ಫಲವಿಲ್ಲ. ಮೊದಲು ಅವನ ಕಣ್ಣುಗಳು ತೆರೆದಿರಬೇಕು. ಅನಂತರ ಮಾತ್ರ ಆ ಸಂಗ್ರಹಾಲಯದಿಂದ ಅವನು ಏನನ್ನಾದರೂ ಕಲಿಯಬಹುದು.

ಧರ್ಮವನ್ನು ಹುಡುಕುವವನ ಕಣ್ಣನ್ನು ತೆರೆಯುವವನೇ ಗುರು. ವಂಶದ ಹಿರಿಯರಲ್ಲಿ ಆ ವಂಶದ ಕಿರಿಯರಿಗೆ ಯಾವ ಗೌರವವಿರುತ್ತದೋ ಅದೇ ಗೌರವ ಶಿಷ್ಯನಿಗೆ ಗುರುವಿನಲ್ಲಿ ಇರಬೇಕು. ನಂಬಿಕೆ, ವಿಧೇಯತೆ ಅತಿಶಯವಾದ ಸಮ್ಯಭಾವನೆ ಇವುಗಳನ್ನು ನಾವು ಗುರುವಿನಲ್ಲಿ ಇಟ್ಟ ಹೊರತು ನಮ್ಮಲ್ಲಿ ಧರ್ಮದ ಬೆಳವಣಿಗೆ ಉಂಟಾಗುವುದಿಲ್ಲ. ಎಲ್ಲಿ ಗುರು ವಿಗೂ ಶಿಷ್ಯನಿಗೂ ಈ ಬಗೆಯಾದ ಸಂಬಂಧವಿದೆಯೋ ಅಲ್ಲಿ ಮಾತ್ರ ಆತ್ಮಜ್ಞಾನದ ಜ್ಯೋತಿಗಳು ಸೃಷ್ಟಿಯಾಗುವುದು ಗಮನಿಸತಕ್ಕ ವಿಷಯ. ಈ ಪರಂಪರೆಯನ್ನು ಬೆಳಸದೆ ಬಿಟ್ಟ ದೇಶಗಳಲ್ಲಿ ಧರ್ಮಗುರುವು ಬರಿಯ ಉಪನ್ಯಾಸಕನು ಮಾತ್ರವಾಗಿದ್ದಾನೆ. ಅಲ್ಲಿ ಉಪಾಧ್ಯಾಯನಿಗೆ ತನ್ನ ಶುಲ್ಕದ ಆಸೆಯಿದೆ. ವಿದ್ಯಾರ್ಥಿಗೆ ತನ್ನ ಬುದ್ಧಿಯು ಉಪಾಧ್ಯಾಯನ ಮಾತುಗಳಿಂದ ತುಂಬಿಕೊಳ್ಳುವ ನಿರೀಕ್ಷಣೆ ಇದೆ. ಅನಂತರ ಒಬ್ಬರ ವಿಷಯವನ್ನು ಒಬ್ಬರು ಯೋಚಿಸದೆ ಇಬ್ಬರೂ ತಮ್ಮ ತಮ್ಮ ದಾರಿ ಯನ್ನು ಹಿಡಿಯುತ್ತಾರೆ. ಅಂತಹ ಸ್ಥಿತಿಯಲ್ಲಿ ಆತ್ಮಜ್ಞಾನವು ಬಹಳ ಅಪರೂಪದ ವಸ್ತುವಾಗುತ್ತದೆ. ಯಾಕೆಂದರೆ ಅದನ್ನು ಕಲಿಸುವವರೂ ದೊರೆಯುವುದಿಲ್ಲ. ಕಲಿಯತಕ್ಕವರೂ ಸಿಗುವುದಿಲ್ಲ. ಅಂಥವರಿಗೆ ಧರ್ಮ ವೆಂಬುದು ಒಂದು ವ್ಯಾಪಾರಸಾಮಗ್ರಿಯಾಗುತ್ತದೆ. ಅದನ್ನು ಹಣದಿಂದ ಸಂಪಾದಿಸಬಹುದೆಂದು ಅವರು ಯೋಚಿಸುತ್ತಾರೆ. ದೇವರ ದಯದಿಂದ ಧರ್ಮವು ಹಾಗೆ ದೊರಕುವಂತಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು. ಆದರೆ ದುರದೃಷ್ಟದಿಂದ ಅದು ಸಾಧ್ಯವಾಗಿಲ್ಲ.

ಮನುಷ್ಯನ ಜ್ಞಾನದ ಪರಮಾವಧಿಯಾದ ಧರ್ಮವನ್ನು ಕೊಳ್ಳು ವುದು ಸಾಧ್ಯವಲ್ಲ. ಗ್ರಂಥಗಳಿಂದ ಸಂಪಾದಿಸುವುದೂ ಸಾಧ್ಯವಿಲ್ಲ. ನೀವು ಪ್ರಪಂಚದಲ್ಲಿ ಎಲ್ಲಿಗೆ ಬೇಕಾದರೂ ಹೋಗಬಹುದು. ಹಿಮಾಲಯ ಪರ್ವತವನ್ನೂ ಆಲ್ಪ್ಸ್ ಪರ್ವತವನ್ನೂ ಕಾಕಸಸ್ ಪರ್ವತಗಳನ್ನೂ

ಹುಡುಕಬಹುದು. ಸಮುದ್ರದ ತಳವನ್ನು ಹೊಕ್ಕು ನೋಡಬಹುದು. ಟಿಬೆಟ್ ದೇಶವನ್ನೂ ಗೋಬಿ ಮರುಭೂಮಿಯನ್ನೂ ಶೋಧಿಸಬಹುದು. ಆದರೆ ಧರ್ಮವನ್ನು ಸ್ವೀಕರಿಸಲು ನಿಮ್ಮ ಹೃದಯವು ಸಿದ್ಧವಾಗಿ ನಿಮ್ಮ ಗುರುವು ಬರುವವರೆಗೆ ನಿಮಗೆ ಧರ್ಮವು ದೊರಕುವುದಿಲ್ಲ. ಆದುದರಿಂದ ದೇವರು ಕಳುಹಿಸುವ ಆ ಗುರುವು ಬಂದಾಗ ಅವನನ್ನು ಮಗುವಿಗೆ ಸಹಜವಾದ ಸರಳತೆ ಮತ್ತು ನಂಬಿಕೆಯಿಂದ ಸೇವಿಸಿ. ಅವನೇ ದೇವರ ಅವತಾರವೆಂದು ತಿಳಿದು ನಿಮ್ಮ ಹೃದಯವನ್ನು ಬಿಚ್ಚಿ. ಅವನ ಪ್ರಭಾವವು ಪ್ರವೇಶಿಸುವಂತೆ ಮಾಡಿ. ಯಾಕೆಂದರೆ ಯಾರು ಪ್ರೇಮ ಮತ್ತು ಭಕ್ತಿಯಿಂದ ಕೂಡಿದ ಮನೋಭಾವದಿಂದ ಸತ್ಯಾನ್ವೇಷಣಕ್ಕಾಗಿ ಗುರುವಿನ ಬಳಿಗೆ ಬರುವರೋ ಅವರಿಗೆ ಮಾತ್ರ ಗುರುವು ದೇವರನ್ನೂ ಆತ್ಮವನ್ನೂ ಕುರಿತ ಆಶ್ಚರ್ಯಕರಗಳಾದ ತತ್ವಗಳ ಗುಟ್ಟುಗಳನ್ನು ಉಪದೇಶಿಸುತ್ತಾನೆ.

## ೬ ಅವತಾರ ಮಾಡಿದ ಗುರುಗಳೂ ಮತ್ತು ಅವತಾರಗಳೂ

"ದೇವರ ಹೆಸರನ್ನು ಹೇಳಿದ ಸ್ಥಳವು ಪವಿತ್ರವಾಗುವುದು." ಹೀಗಿರುವಾಗ ದೇವರ ಹೆಸರನ್ನು ಹೇಳುವ ಮನುಷ್ಯನು ಇನ್ನೆಷ್ಟು ಹೆಚ್ಚು ಪವಿತ್ರನಾಗಿರಬಹುದು? ಯಾರಿಂದ ನಮಗೆ ನಿಜವಾದ ಆತ್ಮಜ್ಞಾನವು ಲಭ್ಯವಾಗುವುದೋ ಅವನನ್ನು ನಾವು ಅತ್ಯಂತ ಭಕ್ತಿಯಿಂದ ಸೇವಿಸಬೇಡವೆ? ಅಂತಹ ಆತ್ಮಜ್ಞಾನವನ್ನು ಬೋಧಿಸುವ ಗುರುಗಳು ಬಹಳ ಅಪರೂಪವಾಗಿರಬಹುದು. ಆದರೆ ಪ್ರಪಂಚದಲ್ಲಿ ಯಾವಾಗಲೂ ಅವರು ಇಲ್ಲದೆ ಇಲ್ಲ. ಅಂತಹ ಗುರುಗಳು ಪ್ರಪಂಚದಲ್ಲಿ ಪೂರ್ಣವಾಗಿ ಇಲ್ಲದೆ ಹೋದರೆ ತತ್‌ಕ್ಷಣವೇ ಜಗತ್ತು ನರಕವಾಗಿ ನಾಶವಾಗುತ್ತದೆ. ಅವರೇ ಜಗತ್ತಿನ ಸೃಷ್ಟಿಯಲ್ಲಿ ಅತ್ಯಂತ ಶ್ರೇಷ್ಠರು. ಅವರೇ ಕಾರಣವಿಲ್ಲದೆ ಇತರರಲ್ಲಿ ದಯಾಸಮುದ್ರವನ್ನು ತೋರಿಸುವವರು. *

* ಅಹೇತುಕ ದಯಾಸಿಂಧುಃ (ವಿವೇಕಚೂಡಾಮಣಿ ೩೫)

ಶ್ರೀ ಕೃಷ್ಣನು ಭಾಗವತದಲ್ಲಿ ನಾನೇ ಎಲ್ಲರಿಗೂ ಆಚಾರ್ಯ ಗುರು ಎಂದು ತಿಳಿ ‡ ಎಂಬುದಾಗಿ ಹೇಳಿದ್ದಾನೆ. ಗುರುಗಳು ಜಗತ್ತಿನ ಉಳಿದ ಪ್ರಾಣಿಗಳಿಗಿಂತ ಉತ್ತಮರೂ ಉದಾತ್ತರೂ ಆಗಿದ್ದಾರೆ. ಆದುದರಿಂದಲೇ ಅವರನ್ನು ಅವತಾರಪುರುಷರೆಂದು ಜನರು ಗಣಿಸಿರುವುದು. ಅವರು ಸ್ಪರ್ಶಮಾತ್ರದಿಂದಲೆ ಆತ್ಮಜ್ಞಾನವನ್ನು ಇತರರಿಗೆ ಉಂಟುಮಾಡಬಹುದು; ಅಥವ ಸ್ಪರ್ಶವೂ ಇಲ್ಲದೆ ಬರಿಯ ಇಚ್ಛೆಯಿಂದಲೇ ಉಂಟುಮಾಡಬಹುದು. ಗುರುವಿನ ಅಪ್ಪಣೆಯಾಯಿತೆಂದರೆ ಸಾಕು. ಅರಗಳಿಗೆಯೊಳಗೆ ಅಲ್ಪವಾದ ಹೀನಸ್ವಭಾವದವರೆಲ್ಲಾ ಸಾತ್ವಿಕ ಶಿರೋಮಣಿಗಳಾಗುತ್ತಾರೆ. ಅವರೇ ನಿಜವಾಗಿಯೂ ಮನುಷ್ಯರೂಪದಲ್ಲಿ ಬಂದ ದೇವರುಗಳು. ಗುರುಗಳ ಮೂಲಕವಲ್ಲದೆ ಇನ್ನಾವ ದಾರಿಯಿಂದಲೂ ದೇವರನ್ನು ನೋಡಲು ನಮಗೆ ಸಾಧ್ಯವಿಲ್ಲ. ಅವರನ್ನು ಪೂಜೆಮಾಡದೆ ಇರುವುದು ಮನುಷ್ಯನಿಂದ ಸಾಧ್ಯವಿಲ್ಲ. ಮತ್ತಾ ಪೂಜೆಗೆ ಅರ್ಹರು ಅವರು ಮಾತ್ರ.

ಗುರುಗಳ ರೂಪವಾದ ಮನುಷ್ಯರ ಮೂಲಕವಲ್ಲದೆ ದೇವರನ್ನು ಮತ್ತಾವ ರೀತಿಯಿಂದಲೂ ನೋಡಲು ಸಾಧ್ಯವಿಲ್ಲ. ಹಾಗೆ ನೋಡಲು ನಾವು ಪ್ರಯತ್ನಿಸಿದರೆ ದೇವರ ರೂಪವನ್ನೇ ವಿಕಾರಮಾಡಿ, ನಮ್ಮ ಮನಸ್ಸಿನ ಈ ರೂಪಕ್ಕೂ ಆ ಮೂಲಕ್ಕೂ ವ್ಯತ್ಯಾಸವೇ ಇಲ್ಲವೆಂದುಕೊಳ್ಳುತ್ತೇವೆ. ಶಿವನ ವಿಗ್ರಹವನ್ನು ಮಾಡಲು ಒಪ್ಪಿ ಅನೇಕ ದಿವಸ ಕಷ್ಟಪಟ್ಟು ಅನಂತರ ಒಂದು ಕಪಿಯನ್ನು ಮಾಡಿ ಕೂರಿಸಿದವನ ಕತೆಯನ್ನು ಜ್ಞಾಪಿಸಿಕೊಳ್ಳಿ. ಹಾಗೆ ದೇವರನ್ನು ಆತನ ನಿಜರೂಪದಲ್ಲಿ ಊಹಿಸಲು ಪ್ರಯತ್ನಪಟ್ಟಾಗಲೆಲ್ಲಾ ನಾವು ಆ ಕೆಲಸದಲ್ಲಿ ಕೃತಕೃತ್ಯರಾಗದೆ ಪರಾಜಯವನ್ನು ಹೊಂದುತ್ತೇವೆ. ಯಾಕೆಂದರೆ ದೇವರು ಮನುಷ್ಯರಿಂದ ಪೂರ್ಣವಾಗಿ ಬೇರೆಯಾಗಿದ್ದಾನೆಂದು ಊಹಿಸುವುದು ಮನುಷ್ಯನಿಗೆ ಸಾಧ್ಯವಿಲ್ಲ. ನಮ್ಮ ಮನುಷ್ಯ ಸ್ವಭಾವವನ್ನು ನಾವು ಮೀರಿ ಬೆಳೆದು ದೇವರನ್ನು ಆತನ ನಿಜರೂಪದಲ್ಲಿ ಕಾಣುವ ಕಾಲವೇನೊ

‡ ಆಚಾರ್ಯಂ ಮಾಂ ವಿಜಾನೀಯಾತ (ಭಾಗವತ ೧೧–೧೭–೨೬)

ಬರಬಹುದು. ಆದರೆ ನಾವು ಎಲ್ಲಿಯವರೆಗೆ ಈಗ ಇರುವ ಸ್ಥಿತಿಯಲ್ಲಿ ಇರುವೆವೋ ಅಲ್ಲಿಯವರೆಗೆ ಅವನನ್ನು ಮನುಷ್ಯನಂತೆ ಮನುಷ್ಯರಲ್ಲೆ ಪ್ರೀತಿಸಿ ಪೂಜಿಸಬೇಕು. ನೀವು ನಿಮಗೆ ಬೇಕಾದಷ್ಟು ಬೇಕಾದ ರೀತಿಯಲ್ಲಿ ಮಾತನಾಡಬಹುದು. ಆದರೆ ಮನುಷ್ಯ ರೂಪವನ್ನು ಬಿಟ್ಟು ಬೇರೆ ರೂಪದಿಂದ ಅವನನ್ನು ಊಹಿಸಲು ನಿಮ್ಮಿಂದ ಸಾಧ್ಯವಾಗುವುದಿಲ್ಲ. ನೀವು ದೇವರನ್ನು ಕುರಿತು ದೊಡ್ಡ ಉಪನ್ಯಾಸ ಮಾಡಬಹುದು. ಕಾರಣ ವಾದಿಗಳಾಗಬಹುದು. ನಿಮ್ಮ ಮನಸ್ಸಿಗೆ ಸಮಾಧಾನವಾಗುವಂತೆ ಅವತಾರಗಳ ಕಥೆಯಲ್ಲಾ ಅಸಂಬದ್ಧ ಪ್ರಲಾಪವೆಂದು ಸಾಧಿಸಬಹುದು. ಆದರೆ ವಿವೇಕದಿಂದ ಯೋಚಿಸಿದರೆ ನಿಮ್ಮ ಮಾತುಗಳೊಂದರಲ್ಲೂ ಅರ್ಥವಿಲ್ಲವೆಂದು ನಿಮಗೇ ಗೊತ್ತಾಗುವುದು. ಆದುದರಿಂದ ಒಬ್ಬ ಮನುಷ್ಯನು ದೇವರ ಮೇಲೆ ದೊಡ್ಡ ಉಪನ್ಯಾಸಮಾಡಿ ಅವತಾರಗಳಿಗೆ ವಿರೋಧವಾಗಿ ಉಪದೇಶಿಸುತ್ತಿದ್ದರೆ ಅವನನ್ನು ಹಿಡಿದು "ನಿನ್ನ ಅಭಿಪ್ರಾಯದಲ್ಲಿ ದೇವರು ಎಂದರೆ ಏನು. ಸರ್ವಶಕ್ತ ಸರ್ವಮಯ ಮುಂತಾದ ಮಾತುಗಳಿಗೆ ಅರ್ಥವೇನು" ಎಂಬುದಾಗಿ ಕೇಳಿ. ಅವುಗಳಿಗೆ ಏನೂ ಅರ್ಥವಿಲ್ಲ. ಮನುಷ್ಯ ಸ್ವಭಾವಕ್ಕೆ ಸಂಬಂಧವಿಲ್ಲದ ಯಾವ ಅರ್ಥವನ್ನೂ ಅವುಗಳಿಗೆ ಅವನು ಹೇಳಲಾರನು. ಈ ವಿಷಯದಲ್ಲಿ ಪುಸ್ತಕವನ್ನೇ ಓದದಿರುವ ದಾರಿಹೋಕನಿಗಿಂತ ಅವನು ಯಾವ ವಿಧದಲ್ಲೂ ಉತ್ತಮನಲ್ಲವೆಂಬುದು ನಿಮಗೇ ತಿಳಿಯುವುದು. ದಾರಿಹೋಕನು ತನ್ನ ಪಾಡಿಗೆ ತಾನು ಇರುತ್ತಾನೆ. ಅವನಿಂದ ಪ್ರಪಂಚದ ಶಾಂತಿಗೆ ಭಂಗವಿಲ್ಲ. ಆದರೆ ಇಂತಹ ವಾಚಾಳಿಗಳಿಂದ ಜನರಲ್ಲಿ ಅಶಾಂತಿಯೂ ತಾಪತ್ರಯವೂ ಉಂಟಾಗುತ್ತದೆ. ಧರ್ಮವು ನಮ್ಮ ಅನುಭವಕ್ಕೆ ಮಾತ್ರ ಸಂಬಂಧಪಟ್ಟುದು. ನಮ್ಮ ಹೃದಯದ ಅಂತರಾಳದಲ್ಲಿ ಸ್ವಾಭಾವಿಕವಾಗಿ ನಾವು ಅನುಭವಿಸುವ ಭಾವಗಳಿಗೂ, ಬರಿಯ ಮಾತುಗಳಿಗೂ ಇರುವ ವ್ಯತ್ಯಾಸವನ್ನು ನಾವು ಗಣನೆಗೆ ತೆಗೆದುಕೊಳ್ಳಬೇಕು. ಆದರೆ ಈ ವಿಚಾರದಲ್ಲಿ ವಿವೇಕ ಬುದ್ಧಿ ಇಲ್ಲದಿರುವುದಕ್ಕಿಂತ ಹೆಚ್ಚು ಆಶ್ಚರ್ಯಕರವಾದುದು ಮತ್ತಾವುದೂ ಇಲ್ಲ.

ನಮ್ಮ ಮನಸ್ಸಿನ ಈಗಿನ ಸ್ಥಿತಿಗನುಸಾರವಾಗಿ ನಾವು ದೇವರನ್ನು ಮನುಷ್ಯ ರೂಪದಲ್ಲಿ ಮಾತ್ರ ಕಾಣಬಹುದು. ಎಮ್ಮೆಗಳು ದೇವರನ್ನು ಪೂಜಿಸಬೇಕಾದರೆ ತಮ್ಮ ಸ್ವಭಾವಕ್ಕನುಗುಣವಾಗಿ ದೇವರು ದೊಡ್ಡ ಎಮ್ಮೆಯೆಂದುಕೊಳ್ಳುವುವೆಂದೂ, ಮೀನುಗಳು ದೇವರನ್ನು ಪೂಜಿಸ ಬೇಕಾದರೆ ದೇವರು ದೊಡ್ಡ ಮೀನು ಎಂದುಕೊಳ್ಳುವುವೆಂದೂ, ಮನು ಷ್ಯನು ದೇವರು ಮನುಷ್ಯರೂಪವೇ ಎಂದುಕೊಳ್ಳುವನೆಂದೂ ಉಕ್ತ ವಾಗಿದೆ. ದೇವರನ್ನು ಕುರಿತ ಈ ರೀತಿಯಾದ ಸಂಕುಚಿತ ಭಾವಗಳಿಗೆ ನಮ್ಮ ಊಹನೆಯು ಅಲ್ಪವಾಗಿರುವುದು ಮಾತ್ರವೇ ಕಾರಣವಲ್ಲ. ಯಾಕೆಂದರೆ ಮನುಷ್ಯ, ಎಮ್ಮೆ, ಮೀನು ಇವುಗಳನ್ನು ಬೇರೆ ಬೇರೆ ಆಕೃತಿಯ ಬೇರೆ ಬೇರೆ ಪ್ರಮಾಣದ ಪಾತ್ರೆಗಳೆಂದುಕೊಳ್ಳಬಹುದು. ಆ ಪಾತ್ರೆಗಳು ದೇವರೆಂಬ ಸಮುದ್ರಕ್ಕೆ ಹೋಗಿ ತುಂಬಿಕೊಳ್ಳುವುವೆಂದು ಊಹಿಸಿದರೆ ಮನುಷ್ಯಪಾತ್ರೆಯು ಮನುಷ್ಯ ರೂಪವನ್ನೂ, ಎಮ್ಮೆಯ ಪಾತ್ರೆಯು ಎಮ್ಮೆಯ ರೂಪವನ್ನೂ, ಮೀನಿನ ಪಾತ್ರೆಯು ಮೀನಿನ ರೂಪವನ್ನೂ ಹೊಂದುತ್ತದೆ. ಪ್ರತಿಯೊಂದು ಪಾತ್ರೆಯಲ್ಲಿಯೂ ದೇವ ರೆಂಬ ಸಮುದ್ರದ ಒಂದೇ ನೀರು ಇದ್ದರೂ ಅವು ತಮ್ಮ ಸ್ವಂತ ಆಕೃತಿ ಮತ್ತು ಪ್ರಮಾಣದ ರೂಪದಲ್ಲಿಯೇ ತೋರುತ್ತವೆ. ಪ್ರತಿಯೊಬ್ಬ ಮನು ಷ್ಯನೂ ತನ್ನ ಮನಸ್ಸು ಮತ್ತು ದೇಹಕ್ಕೆ ಅನುಸಾರವಾಗಿ ತನ್ನ ದೇವ ರನ್ನು ನಿರ್ಮಿಸಿಕೊಳ್ಳುತ್ತಾನೆ. ಅದಕ್ಕಾಗಿ ನಾವು ಯಾರನ್ನೂ ಆಕ್ಷೇಪಿ ಸುವುದು ಪ್ರಯೋಜನವಿಲ್ಲ. ಯಾಕೆಂದರೆ ಇದರ ಹೊರತು ದೇವರನ್ನು ಧ್ಯಾನಮಾಡಿ ಪೂಜಿಸಲು ಬೇರೆ ದಾರಿಯಿಲ್ಲ.

ಎರಡು ಬಗೆಯ ಜನರು ಮಾತ್ರ ದೇವರನ್ನು ಮನುಷ್ಯನಂತೆ ಪೂಜಿಸುವುದಿಲ್ಲ. ಅವರಲ್ಲಿ ಒಂದು ಬಗೆಯದು ಧರ್ಮವೇ ಇಲ್ಲದ ಪಶು. ಎರಡನೆಯದು ಪರಮಹಂಸ. ಪರಮಹಂಸನು ಸಮಸ್ತವಾದ ಆಸೆ ಗಳನ್ನೂ ಜಯಿಸಿ ಮನುಷ್ಯತ್ವದ ಬಂಧನಗಳನ್ನು ಮೀರಿ ಬೆಳೆಯುತ್ತಾನೆ. ಅವನಿಗೆ ಪ್ರಕೃತಿಯೆಲ್ಲಾ ತನ್ನಂತೆಯೆ ಆಗುತ್ತದೆ. ದೇವರನ್ನು ಅವನು ಇರುವಂತೆಯೆ ಪೂಜಿಸಲು ಅವನಿಗೆ ಮಾತ್ರ ಸಾಧ್ಯ. ಪ್ರಕೃತಿಯಲ್ಲಿ

ಎಲ್ಲೆಡೆಯೂ ಇರುವಂತೆ ಇಲ್ಲೂ ಎರಡು ತುದಿಗಳು ಸೇರುತ್ತವೆ. ಅತಿ ಅಜ್ಞಾನ, ಅತಿ ಜ್ಞಾನ ಎರಡೂ ಪೂಜೆಗೆ ಸಲ್ಲುತ್ತವೆ. ಮನುಷ್ಯಪಶುಪ್ರ ಅಜ್ಞಾನಿಯಾದುದರಿಂದ ದೇವರನ್ನು ಪೂಜಿಸುವುದಿಲ್ಲ. ಜೀವನ್ಮುಕ್ತರು ದೇವರ ಸಾಕ್ಷಾತ್ಕಾರವನ್ನು ಪಡೆದಿರುವುದರಿಂದ ಅವರೂ ದೇವರನ್ನು ಪೂಜಿಸುವುದಿಲ್ಲ. ಈ ಎರಡು ಪರಮಾವಧಿಗಳಿಗೆ ಸೇರದ ಯಾರಾದರೂ ನಿಮ್ಮೊಡನೆ ದೇವರನ್ನು ಮನುಷ್ಯನೆಂದು ನಾನು ಪೂಜಿಸುವುದಿಲ್ಲವೆಂದು ಹೇಳಿದರೆ ಅವನಲ್ಲಿ ಕರುಣೆಯಿಡಿ. ಬಹಳ ಮೃದುವಾಗಿ ಹೇಳಬೇಕಾದರೆ ಅವನು ಜವಾಬ್ದಾರಿಯಿಲ್ಲದ ಮನುಷ್ಯ. ಅವನ ಧರ್ಮವು ಅನ್ಯವಸ್ಥಿತ ವಾದ ಮನಸ್ಸಿನ ಬುದ್ಧಿಹೀನರಿಗೂ ಮಾತ್ರ ಅನ್ವಯಿಸುತ್ತದೆ.

ದೇವರಿಗೆ ಮನುಷ್ಯನ ದೋಷಗಳು ಗೊತ್ತಾಗುತ್ತವೆ. ಮನುಷ್ಯ ರಿಗೆ ಒಳ್ಳೆಯದನ್ನು ಮಾಡಬೇಕೆಂದು ದೇವರು ತಾನೂ ಮನುಷ್ಯ ನಾಗುತ್ತಾನೆ. "ಧರ್ಮಕ್ಕೆ ಗ್ಲಾನಿಯುಂಟಾದಾಗ ಧರ್ಮವನ್ನು ಸ್ಥಾಪಿಸಲು ನಾನು ಬರುತ್ತೇನೆ. ‡ "ಬ್ರಹ್ಮಾಂಡಗಳಿಗೆಲ್ಲಾ ಒಡೆಯ ನಾದ ನಾನು ಮನುಷ್ಯರೂಪವನ್ನು ಧರಿಸಿರುವುದರಿಂದ ಅವಿವೇಕಿಗಳು ನನ್ನನ್ನು ಅವಹೇಳನ ಮಾಡುತ್ತಾರೆ." * ಅವತಾರಗಳನ್ನು ಕುರಿತು ಕೃಷ್ಣಪರಮಾತ್ಮನು ಗೀತೆಯಲ್ಲಿ ಮೇಲೆ ಹೇಳಿದಂತೆ ಹೇಳಿದ್ದಾನೆ. ರಾಮಕೃಷ್ಣ ಪರಮಹಂಸರು ಹೀಗೆ ಹೇಳಿದ್ದಾರೆ. "ದೊಡ್ಡ ಪ್ರವಾಹವು ಬಂದಾಗ ಸಣ್ಣ ಸಣ್ಣ ಹಳ್ಳಗಳು ತಮ್ಮ ಪ್ರಯತ್ನವಿಲ್ಲದೆ ತುಂಬಿಕೊಳ್ಳು ತ್ತವೆ. ಅದೇ ರೀತಿ ಅವತಾರಪುರುಷರು ಬಂದಾಗ ಆತ್ಮಶಕ್ತಿಯು ಜಗತ್ತನ್ನೆಲ್ಲಾ ತುಂಬುತ್ತದೆ. ಜನರು ಎಲ್ಲೆಲ್ಲು ದೇವರನ್ನು ಅನುಭವ ಮಾಡುತ್ತಾರೆ"

---

‡ ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ (ಗೀತಾ ೪-೭)
ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೆ (ಗೀತಾ ೪-೮)

* ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ
ಪರಂಭಾವಮಜಾನಂತೋ ಮಮಭೂತ ಮಹೇಶ್ವರಂ (ಗೀತಾ ೯-೧೧)

## ೭ ಮಂತ್ರ-ಓಂ-ಶಬ್ದ ಜ್ಞಾನ

ಮಹಾಪುರುಷರನ್ನೂ ದೇವರ ಅವತಾರಗಳನ್ನೂ ನಾವು ಇಲ್ಲಿ ಗಣನೆಗೆ ತೆಗೆದುಕೊಂಡಿಲ್ಲ. ಆದರೆ ಧರ್ಮವನ್ನು ಸಾಧಿಸಿರುವ ಸಿದ್ಧಗುರುಗಳನ್ನು ಮಾತ್ರ ತೆಗೆದುಕೊಂಡಿರುತ್ತೇವೆ. ಅವರು ಶಿಷ್ಯನಿಗೆ ಆತ್ಮಜ್ಞಾನದ ಬೀಜವನ್ನು ಮಂತ್ರದ ಮೂಲಕ ಮಾತ್ರ ತಿಳಿಸಬಹುದು. ಈ ಮಂತ್ರಗಳ ಮೇಲೆ ಚಿಂತನೆಯನ್ನು ಮಾಡಬೇಕು. ಹಾಗಾದರೆ ಈ ಮಂತ್ರಗಳಾವುವು? ಹಿಂದೂ ವೇದಾಂತಕ್ಕೆ ಅನುಸಾರವಾಗಿ, ಬ್ರಹ್ಮಾಂಡವೆಲ್ಲಾ ಅನಿವಾರ್ಯವಾಗಿ ನಾಮರೂಪಗಳನ್ನುಳ್ಳವಾಗಿವೆ. ಅದೇ ಅದರ ಇರುವಿಕೆಯ ನಿಯಮ. ಮನುಷ್ಯ ದೇಹದಲ್ಲಿ ನಾಮರೂಪಗಳಿಲ್ಲದ ಯಾವ ಪ್ರವೃತ್ತಿಗಳೂ ಇಲ್ಲವೇ ಇಲ್ಲ. ಪ್ರಕೃತಿಯು ಉದ್ದಕ್ಕೂ ಇದೇ ರೀತಿಯಲ್ಲಿ ಸೃಷ್ಟಿಯಾಗಿರುವುದು ನಿಜವಾದರೆ ಬ್ರಹ್ಮಾಂಡದ ಸೃಷ್ಟಿಯಲ್ಲೂ ಈ ಬಗೆಯ ನಾಮರೂಪಗಳು ಇರಲೇಬೇಕು. ಒಂದು ಹೆಂಟೆ ಮಣ್ಣಿನಿಂದ ಉಳಿದ ಎಲ್ಲಾ ಮಣ್ಣುಗಳೂ ಹೇಗೆ ಗೊತ್ತಾಗುತ್ತವೆಯೋ* ಹಾಗೆಯೇ ಬ್ರಹ್ಮಾಂಡದ ಒಂದು ಜ್ಞಾನವು ಎಲ್ಲದರ ಜ್ಞಾನವನ್ನೂ ನಮಗೆ ಉಂಟುಮಾಡುತ್ತದೆ. ರೂಪವು ಹೊರಗಿನ ಸಿಪ್ಪೆ. ನಾಮವು ಒಳಗಿನ ಮುಖ್ಯವಾದ ತಿರುಳು. ಮನುಷ್ಯದೇಹವೆಂಬ ಬ್ರಹ್ಮಾಂಡದಲ್ಲಿ ದೇಹವು ರೂಪ. ಅಂತಃಕರಣವು ನಾಮ. ಮಾತನಾಡುವ ಶಕ್ತಿ ಇರುವವರಿಗೆಲ್ಲಾ ಮಾತು ನಾಮದೊಂದಿಗೆ ಸಂಬಂಧಿಸಿದೆ. ಅಂದರೆ ಮನುಷ್ಯನಲ್ಲಿ ಉಂಟಾಗತಕ್ಕ ಯೋಚನಾತರಂಗಗಳು ಮೊದಲು ಅವನ ಮಹತ್ ಆದ ಮನಸ್ಸಿನಲ್ಲಿ ಭಾವ ಮತ್ತು ಮಾತುಗಳಾಗಿ ತೋರಿ ಅನಂತರ ಸ್ಪಷ್ಟವಾದ ವಾಕ್ ಮತ್ತು ಕಾರ್ಯಗಳಾಗುತ್ತವೆ.

ಹಾಗೆಯೇ ಬ್ರಹ್ಮಾಂಡದಲ್ಲಿ ಬ್ರಹ್ಮ ಅಥವಾ ಹಿರಣ್ಯಗರ್ಭನು ಮೊದಲು ನಾಮದಂತೆ ವ್ಯಕ್ತನಾಗಿ ಅನಂತರ ರೂಪ, ಬಾಹ್ಯಪ್ರಪಂಚ

---

* ಯಥಾಸೋಃ ಮೃಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್ (ಛಾಂದೋಗ್ಯ ೬-೨)

ವಾಗಿ ವ್ಯಕ್ತವಾಗುತ್ತಾನೆ. ಹೊರಕ್ಕೆ ಪ್ರಕಟವಾಗಿರುವ ಈ ವಿವೇಕ
ಯುತವಾದ ಬ್ರಹ್ಮಾಂಡವೆಲ್ಲಾ ರೂಪ. ಈ ರೂಪದ ಹಿಂದೆ ಶಾಶ್ವತ
ವಾದ ಅನಿರ್ವಚನೀಯವಾದ ಸ್ಫೋಟ ಎಂದರೆ ಪ್ರಪಂಚದ ಸೃಷ್ಟಿಕರ್ತನು
ಇದ್ದಾನೆ. ಈ ಸ್ಫೋಟವು ಸ್ವಾಭಾವಿಕವಾಗಿ ಶಾಶ್ವತವಾದುದು
ಜಗತ್ತಿನಲ್ಲಿರುವ ಎಲ್ಲಾ ಭಾವಗಳೂ ಅಥವಾ 'ನಾಮ'ಗಳೂ ಇದ
ರಿಂದಲೇ ಸೃಷ್ಟಿಯಾಗುತ್ತವೆ. ಮತ್ತು ಭಗವಂತನು ಬ್ರಹ್ಮಾಂಡವನ್ನು
ಸೃಷ್ಟಿಸುವ ಶಕ್ತಿಯೇ ಇದು. ಏಕೆಂದರೆ ಮೊದಲು ದೇವರು ಸ್ಫೋಟ
ವಾಗಿ ಅನಂತರ ಕಣ್ಣಿಗೆ ಕಾಣುವ ಹೆಚ್ಚು ವಿವೇಕವುಳ್ಳ ಬ್ರಹ್ಮಾಂಡ
ಅಥವ ಪ್ರಕೃತಿಯಾಗುತ್ತಾನೆ. ಸ್ಫೋಟಕ್ಕೆ ಗುರುತಾಗಿ ಇರುವುದು
ಒಂದೇ ಒಂದು ಮಾತು. ಅದೇ ಓಂ ಎಂಬುದು. ಯಾವ ವಿಧವಾದ
ವಿಭಜನೆಯಿಂದಲೂ ಒಂದು ಮಾತನ್ನೂ ಅದರ ಭಾವವನ್ನೂ ಬೇರೆ ಬೇರೆ
ಮಾಡಲು ಸಾಧ್ಯವಿಲ್ಲವೋ ಹಾಗೆಯೇ ಶಾಶ್ವತವಾದ ಸ್ಫೋಟವೂ ಓಂ
ಎಂಬುದೂ ಒಂದರಿಂದ ಒಂದು ಬೇರೆಯಲ್ಲ. ಆದುದರಿಂದಲೇ ವೇದಗಳಲ್ಲಿ
ನಾಮದ ಮಾತೆಯಾದ ಮತ್ತು ಪವಿತ್ರ ಪದಗಳಲ್ಲೆಲ್ಲಾ ಅತಿ ಪವಿ
ತ್ರವಾದ ಶಾಶ್ವತವಾದ ಓಂ ಎಂಬುದರಿಂದಲೇ ಈ ಬ್ರಹ್ಮಾಂಡವೆಲ್ಲಾ
ಸೃಷ್ಟಿಯಾಗಿರುವುದೆಂದು ಹೇಳಿರುವುದು. ಭಾವಗಳನ್ನು ಅದರ ಮಾತು
ಗಳಿಂದ ಬೇರೆ ಮಾಡಲು ಸಾಧ್ಯವಿಲ್ಲವಾದರೂ ಒಂದೇ ಭಾವಕ್ಕೆ ಹೇಗೆ
ಅನೇಕ ಬಗೆಯ ಮಾತುಗಳು ಇರಬಹುದೋ ಹಾಗೆಯೇ ಬ್ರಹ್ಮಾಂಡ
ಸೃಷ್ಟಿಯ ಭಾವಕ್ಕೆ ಈ ಓಂ ಎಂಬುದು ಆವಶ್ಯಕತೆಯಿಲ್ಲವೆಂದು ಹೇಳ
ಬಹುದು. ಈ ಆಕ್ಷೇಪಣೆಗೆ ನಾವು ಈ ರೀತಿ ಉತ್ತರ ಕೊಡುತ್ತೇವೆ.
"ಸಮಸ್ತವಾದ ಭಾವಗಳನ್ನೂ ಒಳಗೊಂಡಿರುವ ಮಾತೆಂದರೆ ಓಂ
ಎಂಬುದೇ. ಅದಕ್ಕೆ ಸಮಾನವಾದುದು ಮತ್ತಾವುದೂ ಇಲ್ಲ. ಎಲ್ಲಾ
ಭಾವಗಳೂ ಸ್ಫೋಟದಿಂದಲೇ ಉಂಟಾಗುತ್ತವೆಯೇ ಹೊರತು ಯಾವು
ದಾದರೂ ಒಂದೇ ಒಂದು ಭಾವವಲ್ಲ. ಎಲ್ಲಾ ಮಾತುಗಳಿಗೂ
ಒಂದೊಂದು ಭಾವಗಳನ್ನು ಮಾತ್ರ ಹೇಳುವ ಶಕ್ತಿ ಇದೆ. ಈ ಕಾರಣ
ದಿಂದ, ಎಲ್ಲಾ ಭಾವಗಳ ಮೂಲವಾದ ಸ್ಫೋಟವನ್ನು ವ್ಯಕ್ತಗೊಳಿಸುವ

ಯೋಗ್ಯತೆ ಅವಕ್ಕೆ ಇರುವುದಿಲ್ಲ. ಯಾಕೆಂದರೆ ಒಂದು ಭಾವವನ್ನು ವ್ಯಕ್ತಪಡಿಸಲು ಒಂದು ಮಾತನ್ನು ಹೇಳಿದರೆ ಆ ಮಾತು ಆ ಭಾವಕ್ಕೆ ಮೀಸಲಾಗುತ್ತದೆಯೇ ಹೊರತು ಎಲ್ಲಾ ಭಾವಗಳಿಗೂ ಸ್ಥಾನವಾಗುವುದಿಲ್ಲ. ಆದುದರಿಂದ ಸ್ಫೋಟವನ್ನು ವ್ಯಕ್ತಪಡಿಸಬೇಕಾದರೆ, ಅದನ್ನೇ ಪೃಥಕ್ಕಾಗಿ ಮಾಡದೆ ಬ್ರಹ್ಮಾಂಡದ ಸ್ವಭಾವವನ್ನು ಸಾಧ್ಯವಾದಷ್ಟು ಪೂರ್ಣವಾಗಿ ವಿವರಿಸುವ ಮಾತು ಬೇಕಾಗಿದೆ. ಆಗ ಅದೇ ಸ್ಫೋಟಕ್ಕೆ ಸರಿಯಾದ ಗುರುತಾಗುತ್ತದೆ. ಅದನ್ನೇ ವೇದಗಳು ಓಂ ಎಂಬುದಾಗಿ ಕಂಡುಪಿಡಿದಿರುವುದು. ಅ, ಉ, ಮ ಎಂಬ ಮೂರು ಅಕ್ಷರಗಳಿಂದ ಓಂ ಎಂದು ಹೇಳುವಾಗ ಎಲ್ಲಾ ಮಾತುಗಳೂ ಅದರಲ್ಲಿ ಅಡಕವಾಗಿ ಹೋಗುತ್ತವೆ. ಇದು ಹೇಗೆಂಬುದನ್ನು ನೋಡೋಣ. ಅ ಎಂಬುದನ್ನು ಯಾವ ಮಾತಿನಿಂದಲೂ ಬೇರೆ ಮಾಡಲು ಸಾಧ್ಯವಿಲ್ಲ. ಆ ಕಾರಣದಿಂದಲೇ ಶ್ರೀಕೃಷ್ಣನು ಗೀತೆಯಲ್ಲಿ ಅಕ್ಷರಗಳಿಗೆಲ್ಲಾ ನಾನೇ ಅಕಾರ * ಎಂದು ಹೇಳಿದ್ದಾನೆ. ಎಲ್ಲಾ ಮಾತು ಉಚ್ಚಾರವಾಗುವುದು ಬಾಯಿನಲ್ಲಿ. ನಾಲಗೆಯ ಬೊಡ್ಡೆಯಲ್ಲಿ ಪ್ರಾರಂಭವಾಗಿ ತುಟಿಗಳಲ್ಲಿ ಕೊನೆಯಾಗುತ್ತದೆ. ಕಂಠದಲ್ಲಿ ಹುಟ್ಟುವ ಧ್ವನಿ ಆ ತುಟಿಗಳಲ್ಲಿ ಕೊನೆಯಾಗುವುದು. ಮ ಕಂಠದಲ್ಲಿ ಹುಟ್ಟಿದುದು ತುಟಿಯ ಕೊನೆಗೆ ಬರುವುದರೊಳಗೆ ಅದಕ್ಕೆ ಬರುವ ಬಲವೇ ಉ. ಆದುದರಿಂದ ಸರಿಯಾಗಿ ಉಚ್ಚರಿಸಿದರೆ ಓಂ ಎಂಬ ಪದದಲ್ಲಿ ಆಡಬಹುದಾದ ಎಲ್ಲಾ ಮಾತು ಸೇರಿಕೊಂಡಿದೆ. ಮತ್ತೆ ಯಾವ ಮಾತು ಅಷ್ಟು ಕೆಲಸವನ್ನು ಮಾಡಲಾರದು. ಆದುದರಿಂದ ಈ ಪದವೇ ಸ್ಫೋಟಕ್ಕೆ ಸರಿಯಾದ ಪ್ರತಿನಿಧಿ. ಪ್ರತಿನಿಧಿಯನ್ನು ಅದರ ಮೂಲದಿಂದ ಬೇರೆ ಪಡಿಸಲು ಎಂದಿಗೂ ಸಾಧ್ಯವಿಲ್ಲವಾದುದರಿಂದ ಓಂ ಮತ್ತು ಸ್ಫೋಟ ಎರಡೂ ಒಂದೆ ಆದುದರಿಂದಲೇ ಸ್ಫೋಟಕ್ಕೆ ನಾದಬ್ರಹ್ಮವೆಂದು ಹೆಸರು. ಮತ್ತು ಸ್ಫೋಟವು ಈ ವ್ಯಕ್ತ ಬ್ರಹ್ಮಾಂಡದ ಸೂಕ್ಷ್ಮ ಭಾಗವಾದುದರಿಂದ ದೇವರಿಗೆ ಸಮೀಪವಾಗಿದೆ. ಅದೇ ಭಗವಂತನ ಜ್ಞಾನದ ಮೊದಲ ಸ್ವರೂಪ ಪ್ರಕಾಶ.

---

* ಅಕ್ಷರಾಣಾಮಕಾರೋಽಸ್ಮಿ ( ಗೀತಾ ೧೦–೩೩ )

ಆದುದರಿಂದಲೇ ಓಂ ಎಂಬ ಪದವು ದೇವರನ್ನು ಕುರಿತ ಗುರುತು ಎಂದು ನಿಸ್ಸಂದೇಹವಾಗಿ ಹೇಳಬಹುದು. ವೇದಗಳಲ್ಲಿ ಅಖಂಡ ಸಚ್ಚಿದಾನಂದ ವೆಂದು ಹೇಳಲ್ಪಡುವ ಬ್ರಹ್ಮವು ಸ್ವಲ್ಪಜ್ಞಾನಿಗಳಾದ ಮನುಷ್ಯರಿಂದ ಕೆಲವು ಪರಿಮಿತಿಗಳಲ್ಲಿ ಮಾತ್ರ ತಿಳಿಯಲು ಸಾಧ್ಯ. ಆದುದರಿಂದಲೇ ಅದು ಕೆಲವು ಗುಣಗಳಿಂದ ವಿಶಿಷ್ಟವಾಗಿರುತ್ತದೆ. ಭಗವಂತನ ದೇಹ ವೆಂದು ಕರೆಯಲ್ಪಡಬಹುದಾದ ಬ್ರಹ್ಮಾಂಡವೂ ಕೂಡ ಅವರಿಗೆ ತಿಳಿಯ ಬೇಕಾದರೆ ಇದೇ ರೀತಿ; ಕೆಲವು ದೃಷ್ಟಿಗಳಿಂದ ಮಾತ್ರ ಪೂಜಾರಿಯ ಮನೋಭಾವಕ್ಕೆ ಅನುಸಾರವಾಗಿರುವ ದೇವರನ್ನು ಕುರಿತ ಆ ಭಾವ ನೆಯು, ಅವನ ರಾಜಸ, ತಾಮಸ ಸಾತ್ವಿಕ ಪ್ರವೃತ್ತಿಗಳಿಗೆ ಅನುಸಾರ ವಾಗಿಯೇ ಇರುತ್ತದೆ. ಆದುದರಿಂದಲೇ ಒಬ್ಬನೇ ದೇವರು ಪೂಜಾರಿ ಗಳ ಮನೋಭಾವಕ್ಕೆ ಅನುಸಾರವಾಗಿ ಬೇರೆ ಬೇರೆಯಾಗಿಯೂ ಪರ ಸ್ಪರ ವಿರುದ್ಧಗಳಿಂದ ಗುಣಗಳುಳ್ಳವನಾಗಿ ತೋರುತ್ತಾನೆ. ಮತ್ತು ಈ ಬ್ರಹ್ಮಾಂಡವು ಅವರಿಗೆ ಒಂದಕ್ಕೊಂದಕ್ಕೆ ಸಂಬಂಧವಿಲ್ಲದ ಅನೇಕ ಆಕೃ ತಿಗಳ ಸಮೂಹವಾಗಿ ಕಾಣುತ್ತದೆ. ಓಂ ಎಂಬುದರಲ್ಲಿ ನಾವು ನೋಡಿ ರುವ ಮಾತಿಗೂ ಯೋಚನೆಗಳಿಗೂ ಇರುವ ಅನಿವಾರ್ಯವಾದ ಸಂಬಂಧವು ದೇವರನ್ನೂ ಮತ್ತು ಬ್ರಹ್ಮಾಂಡವನ್ನೂ ಕುರಿತ ದೇವರ ಎಲ್ಲಾ ಭಾವಗ ಳಿಗೂ ಅನ್ವಯಿಸುತ್ತದೆ. ಅವುಗಳನ್ನೆಲ್ಲಾ ವ್ಯಕ್ತಮಾಡಲು ಬೇರೆ ಒಂದು ಮಾತು ಬೇಕು. ಋಷಿಗಳು ತಮ್ಮ ಧ್ಯಾನದಲ್ಲಿ ಆ ಮಾತು ಗಳನ್ನು ಕಂಡು ಹಿಡಿದಿದ್ದಾರೆ. ಅವು ಸಾಧ್ಯವಾದ ಮಟ್ಟಿಗೆ ದೇವರ ಮತ್ತು ಬ್ರಹ್ಮಾಂಡದ ಜ್ಞಾನವನ್ನು ನಮಗೆ ಉಂಟುಮಾಡಿ ಕೊಡು ತ್ತವೆ. ಓಂ ಎಂಬುದು ಹೇಗೆ ಅಖಂಡ ಬ್ರಹ್ಮಾಂಡಕ್ಕೆ ಗುರುತೋ ಹಾಗೆಯೇ ಋಷಿಗಳ ಆ ಮಾತುಗಳು ಖಂಡ ಬ್ರಹ್ಮಾಂಡವನ್ನು ಪ್ರತಿ ಧ್ವನಿಸುತ್ತವೆ. ದೇವರನ್ನೂ ಬ್ರಹ್ಮಾಂಡವನ್ನೂ ಕುರಿತು ಬೇರೆ ಬೇರೆ ಯಾದ ಭಾವನೆಗಳನ್ನುಳ್ಳ ಭಕ್ತರಿಗೆಲ್ಲಾ ಆ ಮಾತುಗಳು ತಮ್ಮ ಧ್ಯಾನಕ್ಕೂ ನಿಜವಾದ ಜ್ಞಾನ ಸಂಪಾದನೆಗೂ ಸಹಾಯಕವಾಗುತ್ತವೆ.

---

# ೮ ಪ್ರತಿಮಾರಾಧನೆ

ಭಗವಂತನನ್ನು ನಾವು ಕಾಣುವುದಕ್ಕೆ ಮುಂಚೆ ಕಾಣುವ ವರೆಗೆ, ನಮ್ಮ ಧ್ಯಾನದಲ್ಲಿ ಅವನಿಗೆ ಬದಲಾಗಿ ಪೂಜಿಸುವ ಪ್ರತೀಕ ಮತ್ತು ಪ್ರತಿಮೆಗಳನ್ನು ಕುರಿತು ಈಗ ವಿಚಾರಿಸೋಣ. ಪ್ರತೀಕದ ಮೂಲಕ ದೇವರನ್ನು ಪೂಜಿಸುವುದೆಂದರೇನು? ವೇದಗಳು ಹೀಗೆ ಹೇಳುತ್ತವೆ. *"ಮನಸ್ಸನ್ನು ಭಕ್ತಿಯಿಂದ ಬ್ರಹ್ಮವಲ್ಲದ ಒಂದು ವಸ್ತುವಿನಲ್ಲಿ, ಬ್ರಹ್ಮನನ್ನು ಹುಡುಕುವುದಕ್ಕಾಗಿ ಸದ್ಯಕ್ಕೆ ಅದೇ ಬ್ರಹ್ಮನೆಂದು ತಿಳಿದು ಇರಿಸುವುದು. ಭಗವಾನ್ ರಾಮಾನುಜರು ಹೀಗೆ ಹೇಳುತ್ತಾರೆ "ಮನಸ್ಸನ್ನೇ ಬ್ರಹ್ಮವೆಂದು ಪೂಜಿಸಿ" ಆ ವಾಕ್ಯವು ಒಳಗಿನ ಪ್ರತೀಕಕ್ಕೆ ಅನ್ವಯಿಸುತ್ತದೆ. ಆಕಾಶವೇ ಬ್ರಹ್ಮ ಈ ವಾಕ್ಯವು ಹೊರಗಿನ ಪ್ರತೀಕಕ್ಕೆ ಅನ್ವಯಿಸುತ್ತದೆ. ಮನಸ್ಸು ಒಳಗಿನ ಪ್ರತೀಕ. ಆಕಾಶವು ಹೊರಗಿನ ಪ್ರತೀಕ. ಆದರೆ ಎರಡನ್ನೂ ದೇವರಿಗೆ ಪ್ರತಿಯಾಗಿ ಪೂಜಿಸಬಹುದು. ಶಂಕರರು 'ಸೂರ್ಯನೇ ಬ್ರಹ್ಮ. ಅದೇ ಆಜ್ಞೆ.... ನಾಮವನ್ನು ಬ್ರಹ್ಮವೆಂದು ಪೂಜಿಸುವವನು' ಇತ್ಯಾದಿ ಎಂದು ಹೇಳಿದ್ದಾರೆ. ಈ ವಾಕ್ಯಗಳಲ್ಲಿ ಪ್ರತೀಕ ಪೂಜೆಯ ವಿಷಯವಾಗಿ ಚರ್ಚೆ ಬಂದಿದೆ. ಪ್ರತೀಕ ಎಂದರೆ ಸಮೀಪಕ್ಕೆ ಹೋಗುವುದೆಂದು ಅರ್ಥ. ಪ್ರತೀಕ ಪೂಜೆ ಎಂದರೆ ಪ್ರತಿಯಾದ ವಸ್ತುವಿನ ಮೂಲಕ ದೇವರನ್ನು ಪೂಜಿಸುವದು. ಆ ಪ್ರತಿಯಾದ ವಸ್ತುವು ಅನೇಕ ವಿಷಯಗಳಲ್ಲಿ ಬ್ರಹ್ಮನಿಗೆ ಸಮಾನವಾಗಿರಬಹುದು. ಆದರೆ ಅದು ಬ್ರಹ್ಮವಲ್ಲ. ವೇದಗಳಲ್ಲಿ ಹೇಳಿರುವ ಪ್ರತೀಕಗಳಲ್ಲದೆ ಪುರಾಣದಲ್ಲೂ ತಂತ್ರಗಳಲ್ಲೂ ಅನೇಕ ಪ್ರತೀಕಗಳಿವೆ. ಈ ಪ್ರತೀಕ ಪೂಜೆಯಲ್ಲಿ ಪಿತೃಗಳ ತಿಥಿ, ದೇವತೆಗಳ ಆರಾಧನೆ ಇವುಗಳನ್ನೆಲ್ಲಾ ವೇದಗಳು ಸೇರಿವೆ.

ಈಶ್ವರನ ಪೂಜೆ ಮಾತ್ರವೇ ಭಕ್ತಿ. ದೇವತೆಗಳು ಪಿತೃಗಳು ಮುಂತಾದ ಇತರರ ಪೂಜೆಗೆ ಭಕ್ತಿ ಎಂಬ ಹೆಸರು ಸಲ್ಲುವುದಿಲ್ಲ. ದೇವತೆಗಳ

---

* ಅ ಬ್ರಹ್ಮಣಿ ಬ್ರಹ್ಮದೃಷ್ಟ್ಯಾಽನು ಸಂಧಾನಂ

ಬಗೆಬಗೆಯ ಪೂಜೆಗಳೆಲ್ಲಾ ಕರ್ಮಗಳಿಗೆ ಸೇರಿದುದು. ಅವುಗಳಿಂದ ಭಕ್ತನಿಗೆ ಸ್ವಲ್ಪ ಮಟ್ಟಿನ ಸ್ವರ್ಗದಾನಂದವು ಉಂಟಾಗಬಹುದು. ಆದರೆ ಅದರಿಂದ ನಿಜವಾದ ಭಕ್ತಿಯೂ ಮುಕ್ತಿಯ ದಾರಿಯೂ ದೊರೆಯುವದಿಲ್ಲ. ಆದುದರಿಂದ ಒಂದು ವಿಷಯವನ್ನು ಚೆನ್ನಾಗಿ ಮನಸ್ಸಿನಲ್ಲಿಡಬೇಕು. ಕೆಲವು ವೇಳೆ ಅತ್ಯುಚ್ಚವಾದ ಬ್ರಹ್ಮವು ಭಕ್ತನ ಅಜ್ಞಾನದಿಂದ ಪ್ರತೀಕ ಪೂಜೆಯ ಮಟ್ಟಕ್ಕೆ ಇಳಿಸಲ್ಪಟ್ಟು ಪ್ರತೀಕ ಪೂಜೆಯೇ ಬ್ರಹ್ಮಜ್ಞಾನವೆಂಬ ಅಜ್ಞಾನವು ಅವನಲ್ಲಿ ಉಂಟಾಗಬಹುದು. ಇದು ತಪ್ಪುದಾರಿ. ಏಕೆಂದರೆ ಯಾವ ಪ್ರತೀಕವೂ ಭಕ್ತನ ಪೂಜಾರ್ಹವಾದ ಅಂತರ್ಯಾಮಿಯಾಗಲಾರದು. ಆದರೆ ಎಲ್ಲಿ ಬ್ರಹ್ಮವೇ ಪೂಜೆಯ ಮುಖ್ಯ ವಿಷಯವಾಗಿದ್ದು ಪ್ರತೀಕವು ಅದರ ಬರಿಯ ಪ್ರತಿನಿಧಿಯೊ. ಎಲ್ಲಿ ಪ್ರತೀಕವನ್ನೇ ಬ್ರಹ್ಮದ ಪರಿಣಾಮವೆಂದೂ ಬ್ರಹ್ಮಾಂಡದ ಪ್ರತಿನಿಧಿಯೆಂದೂ ಬ್ರಹ್ಮಕ್ಕೆ ಸಾಧಕವೆಂದೂ ತಿಳಿದು ಪೂಜಿಸುವರೋ ಅಲ್ಲಿ ಪ್ರತೀಕ ಪೂಜೆಯು ಸಹಾಯಕವಾಗಬಹುದು. ಅಷ್ಟೇ ಅಲ್ಲ ಭಕ್ತರು ಪ್ರಾರಂಭ ದೆಸೆಯನ್ನು ದಾಟಿ ಹೋಗುವುದಕ್ಕೆ ಮುಂಚೆ ಈ ವಿಧವಾದ ಪೂಜೆಯು ಅವರಿಗೆ ಅನಿವಾರ್ಯವಾದುದು. ಆದುದರಿಂದ ಯಾವುದಾದರೂ ದೇವರನ್ನಾಗಲಿ ಅಥವ ಇತರರನ್ನಾಗಲಿ ಪೂಜಿಸಿದರೆ ಅದು ಕರ್ಮವಾಗುವುದು. ಅದೊಂದು ವಿದ್ಯವಾದುದರಿಂದ ಅದರಿಂದ ಆ ವಿದ್ಯಕ್ಕೆ ಸಂಬಂಧಪಟ್ಟ ಫಲಗಳು ಮಾತ್ರ ನಮಗೆ ಉಂಟಾಗುವುವು. ಆದರೆ ದೇವತೆಗಳನ್ನಾಗಲಿ ಇತರರನ್ನಾಗಲಿ ಬ್ರಹ್ಮವೆಂದು ತಿಳಿದು ಪೂಜಿಸಿದರೆ, ಈಶ್ವರನನ್ನು ಪೂಜಿಸಿದರೆ ಯಾವ ಫಲವುಂಟಾಗುವುದೊ ಅದೇ ಫಲವುಂಟಾಗುವುದು. ವೇದ ವೇದಗಳೂ ಸ್ಮೃತಿಗಳೂ ಒಬ್ಬ ದೇವತೆ, ಒಬ್ಬ ಋಷಿ ಮುಂತಾದವರನ್ನು ನಿಧಾನವಾಗಿ ಅವರ ಮಟ್ಟದಿಂದ ಮೇಲಕ್ಕೆ ಎತ್ತಿ ಬ್ರಹ್ಮಕ್ಕೆ ಸಮಾನವಾಗಿ ಮಾಡಿ ಪೂಜಿಸುವುದಕ್ಕೂ ಇದೇ ಕಾರಣ. ಅದ್ವೈತಿಯು ಹೀಗೆ ಹೇಳುತ್ತಾನೆ " ಹೆಸರೂ ಆಕಾರವೂ ಇಲ್ಲದ ಎಲ್ಲಾ ವಸ್ತುಗಳೂ ಬ್ರಹ್ಮಗಳೇ ಅಲ್ಲವೆ? " ವಿಶಿಷ್ಟಾದ್ವೈತಿಯು ಹೀಗೆ ಹೇಳುತ್ತಾನೆ " ಬ್ರಹ್ಮವು ಪ್ರತಿಯೊಬ್ಬರ ಅಂತರಾತ್ಮವೇ ಅಲ್ಲವೆ? " ಶಂಕರರು ಈ

ರೀತಿ ಹೇಳಿದ್ದಾರೆ: "ಆದಿತ್ಯ ಮುಂತಾದವರನ್ನು ಪೂಜಿಸಿದರೂ ಸರ್ವಾ
ಧ್ಯಕ್ಷನಾದ ಬ್ರಹ್ಮವೇ ಅದರ ಫಲವನ್ನು ಕರುಣಿಸುತ್ತದೆ. ಈ ರೀತಿ
ಯಿಂದ ಪ್ರತೀಕ ಪೂಜೆಯಲ್ಲಿಯೂ ಬ್ರಹ್ಮವೇ ಪೂಜೆಗೆ ವಿಷಯವಾಗು
ತ್ತದೆ. ಹೇಗೆ ವಿಷ್ಣು ಮುಂತಾದವರುಗಳನ್ನು ವಿಗ್ರಹಗಳಿಗೆ ಆರೋ
ಪಣೆ ಮಾಡುತ್ತೇವೆಯೋ ಹಾಗೆಯೇ ಎಲ್ಲಾ ಪ್ರತೀಕ ಪೂಜೆಗಳನ್ನು
ಮೀರಿ ಬ್ರಹ್ಮವು ಅವುಗಳ ಮೇಲೆ ನಿಂತಿದೆ." *

ಮೇಲೆ ಹೇಳಿದ ಅಭಿಪ್ರಾಯಗಳೇ ಪ್ರತಿಮೆಗಳಿಗೂ ವಿಗ್ರಹ
ಗಳಿಗೂ ಅನ್ವಯಿಸುತ್ತವೆ. ಅಂದರೆ ವಿಗ್ರಹವು ಒಬ್ಬ ದೇವರು ಅಥವ
ಒಂದು ಗುರುವಿಗೆ ಮಾತ್ರ ಅನ್ವಯಿಸಿದಾಗ ಅದು ಭಕ್ತಿಯಲ್ಲ. ಅದ
ರಿಂದ ಮೋಕ್ಷವುಂಟಾಗುವುದೂ ಇಲ್ಲ. ಆದರೆ ಅದು ದೇವರಿಗೆ ಅನ್ವ
ಯಿಸಿದಾಗ ಅದರಿಂದ ಭಕ್ತಿ ಮತ್ತು ಮುಕ್ತಿ ಎರಡೂ ಉಂಟಾಗುತ್ತವೆ.
ಪ್ರಪಂಚದ ಮುಖ್ಯವಾದ ಮತಗಳ ಪೈಕಿ ವೇದಾಂತಮತ, ಬೌದ್ಧಮತ
ಮತ್ತು ಕ್ರೈಸ್ತಮತದ ಕೆಲವು ಪ್ರಕಾರಗಳು ಮೇಲೆ ಹೇಳಿದಂತೆ ವಿಗ್ರಹ
ಗಳನ್ನು ಭಕ್ತಿಗೆ ಸಹಾಯಕವಾಗಿ ಉಪಯೋಗಿಸುತ್ತವೆ. ಮಹಮ
ದೀಯ ಮತ ಮತ್ತು ಪ್ರಾಟೆಸ್ಟೆಂಟ್ ಮತಗಳು ಅವುಗಳನ್ನು ಉಪಯೋ
ಗಿಸಲು ಒಪ್ಪುತ್ತಿಲ್ಲ. ಆದರೂ ಮಹಮ್ಮದೀಯರು ತಮ್ಮ ಮತಾಚಾ
ರ್ಯರ ಮತ್ತು ಸಾಧುಗಳ ಗೋರಿಗಳನ್ನೇ ವಿಗ್ರಹಗಳಂತೆ ಪೂಜಿಸುತ್ತಾರೆ.
ಪ್ರಾಟೆಸ್ಟೆಂಟ್ ಮತದವರು ಮಾತ್ರ ಇಂತಹ ಎಲ್ಲಾ ಸಹಾಯಗಳನ್ನು
ತ್ಯಜಿಸಿ ಬರಬರುತ್ತ ಧರ್ಮದಿಂದ ದೂರವಾಗಿದ್ದಾರೆ. ಈಗ ಅವರ
ಮತವು ಬರಿಯ ನೀತಿಯನ್ನೇ ಬೋಧಿಸುವ ಆಗಸ್ಟೆ ಕೊಮ್ಟೆ ಅಥವಾ
ಆಗ್ನಾಸ್ಟಿಕ್ಸ್‌ರವರ ಮತಕ್ಕೆ ಸಮಾನವಾಗಿದೆ. ಕ್ರೈಸ್ತಮತದಲ್ಲಿಯೂ
ಮಹಮ್ಮದೀಯ ಮತದಲ್ಲೂ ಯಾವುದು ವಿಗ್ರಹಾರಾಧನೆಯೋ ಅದೆಲ್ಲಾ

---

* ಫಲಮಾದಿತ್ಯಾದ್ಯುಪಾಸನೇಷು ಬ್ರಹ್ಮೈವದಾಸ್ಯತಿ ಸರ್ವಾ
ಧ್ಯಕ್ಷತ್ವಾತ್; ಈದೃಶಂ ಚಾತ್ರ ಬ್ರಹ್ಮಣಃ ಉಪಾಸ್ಯತ್ವಂ ಯತಃ ಪ್ರತೀ
ಕೇಷು ತದ್ದೃಷ್ಟ್ಯಾಧ್ಯಾರೋಪಣಂ ಪ್ರತಿಮಾದಿಷು ಇವ ವಿಷ್ಣ್ವಾದೀನಾಂ
( ವೇದಾಂತ ಸೂತ್ರ. ಶಂಕರ ಭಾಷ್ಯ )

ಪ್ರತೀಕ ಅಥವಾ ಪ್ರತಿಮಾ ಪೂಜೆಗೇ ಸೇರಿದುದು. ದೇವರ ದರ್ಶನಕ್ಕೆ ಸಹಕಾರಿ (ದೃಷ್ಟಿಸೌಕರ್ಯ) ಯಾದುದಲ್ಲ. ಆದುದರಿಂದ ಅದೂ ಕರ್ಮದ ಜಾತಿಗೇ ಸೇರಿದುದು. ಅದರಿಂದ ಭಕ್ತಿಯೂ ಮುಕ್ತಿಯೂ ಉಂಟಾಗುವುದಿಲ್ಲ. ಈ ಬಗೆಯ ವಿಗ್ರಹಾರಾಧನೆಯಲ್ಲಿ ಭಕ್ತನ ಮನಸ್ಸು ಈಶ್ವರ ಮತ್ತು ಭಗವಂತನನ್ನು ಬಿಟ್ಟು ಇತರ ವಸ್ತುಗಳಲ್ಲಿ ಸಿಲ್ಲುತ್ತದೆಯಾದುದರಿಂದ ಗೋರಿ, ದೇವಸ್ಥಾನ ಮುಂತಾದವುಗಳ ಪೂಜೆಯು ಕುರುಡು ವಿಗ್ರಹಾರಾಧನೆಯೇ ಆಗುತ್ತದೆ ಆದರೂ ವಿಗ್ರಹಾರಾಧನೆಯು ಕೆಟ್ಟದೂ ಪಾಪಕಾರಕವೂ ಅಲ್ಲ. ಅದೊಂದು ಕರ್ಮ. ಭಕ್ತರಿಗೆ ಅದರ ಫಲವು ಉಂಟಾಗಿಯೇ ಆಗುತ್ತದೆ.

## ೯ ಇಷ್ಟನಿಷ್ಠೆ

ಇನ್ನು ಮುಂದೆ ನಾವು ವಿವೇಚಿಸಬೇಕಾದುದು ವೇದಗಳು ಯಾವುದನ್ನು ಇಷ್ಟನಿಷ್ಠ ಅಂದರೆ ಆರಿಸಿಕೊಂಡ ಗುರಿ ಅಥವ ಧ್ಯೇಯದಲ್ಲಿ ಭಕ್ತಿ ಎಂದು ಹೇಳುತ್ತವೆಯೋ ಅದನ್ನು ಕುರಿತು. ಭಕ್ತನಾಗಲು ಆಶಿಸುವವನಿಗೆ, ಭಗವಂತನ ಉಪಾಸನೆಯಲ್ಲಿ, ಅನೇಕವಾದ ಧ್ಯೇಯಗಳು ಅನೇಕ ಮಾರ್ಗಗಳೆಂದು ತಿಳಿದಿರಬೇಕು. ಶ್ರೀಕೃಷ್ಣಚೈತನ್ಯ ದೇವರು ಈ ರೀತಿ ಹೇಳಿದ್ದಾರೆ: "ನಿನಗೆ ಅನೇಕ ನಾಮಗಳು. ಆ ಎಲ್ಲಾ ನಾಮಗಳಲ್ಲೂ ನಿನ್ನ ಸರ್ವಶಕ್ತಿಯು ಪ್ರಕಟವಾಗಿದೆ. ಯಾವ ನಾಮದಲ್ಲಿ ನಿನ್ನನ್ನು ಪೂಜಿಸಿದರೂ ನೀನು ಭಕ್ತನಿಗೆ ದೊರಕುತ್ತೀಯೆ. ನಿನ್ನ ಪೂಜೆಗೆ ಕಾಲದ ನಿಯಮವಿಲ್ಲ. ಭಕ್ತಿಯಿದ್ದರೆ ಸಾಕು. ನೀನು ಇಷ್ಟು ಸುಲಭನಾದರೂ ನಿನ್ನನ್ನು ನಾನು ಪ್ರೀತಿಸಲಾರೆನೆಂಬುದೇ ನನ್ನ ದುರದೃಷ್ಟ."‡ ಅಷ್ಟೆ ಅಲ್ಲ. ಭಕ್ತನು ಜ್ಯೋತಿಷ ಪುತ್ರರಂತಿರುವ ಆ

‡ ನಾಮ್ನಾಮಕಾರಿ ಬಹುಧಾ ನಿಜಸರ್ವಶಕ್ತಿ-
ಸ್ತತ್ರಾರ್ಪಿತಾ ನಿಯಮಿತಃ ಸ್ಮರಣೇನ ಕಾಲಃ ।
ಏತಾದೃಶೀ ತವ ಕೃಪಾ ಭಗವನ್ಮಮಾಪಿ-
ದುರ್ದೈವಮೀದೃಶಮಿಹಾಜನಿನಾನುರಾಗಃ ॥ (ಶ್ರೀಕೃಷ್ಣಚೈತನ್ಯ)

ಬೇರೆ ಬೇರೆ ಮತಗಳ ಸ್ಥಾಪಕರನ್ನು ದ್ವೇಷಿಸುವುದಾಗಲಿ ಕಠಿಣವಾಗಿ ವಿಮರ್ಶಿಸುವುದಾಗಲಿ ಕೂಡದು. ಅವರನ್ನು ದೂರುವುದನ್ನು ಕೇಳಲೇ ಕೂಡದು. ಗಾಢವಾದ ಪ್ರೇಮ, ಅದರ ಜತೆಯಲ್ಲಿ ಇತರ ಮತಗಳ ವಿಚಾರದಲ್ಲಿ ಸಹಾನುಭೂತಿ ಮತ್ತು ಮೆಚ್ಚುಗೆ ಇವು ಬಹಳ ಸ್ವಲ್ಪ ಜನರಿಗೆ ಇವೆ. ವಿಶಾಲಭಾವನೆಗಳು ಮತ್ತು ಸಹಾನುಭೂತಿಯುಳ್ಳ ಮತ ಗಳು, ಪ್ರೇಮದ ಕಾವನ್ನು ಕಳೆದುಕೊಂಡು, ಒಂದು ವಿಧವಾದ ರಾಜ ಕೀಯ, ಸಾಮಾಜಿಕ ಸಂಘಗಳಂತೆ ತಣ್ಣಗಾಗುವುದು ನಮ್ಮ ಕಣ್ಣಿಗೆ ಬೀಳುತ್ತದೆ. ಹಾಗೆಯೇ ತಮ್ಮ ಮತದಲ್ಲಿ ಗಾಢವಾದ ಪ್ರೇಮವುಳ್ಳ ಮತಾನುಯಾಯಿಗಳು ತಮ್ಮ ಪ್ರೇಮವನ್ನೆಲ್ಲಾ ಅನ್ಯಮತಗಳ ದ್ವೇಷ ದಿಂದಲೇ ಹೊಂದುವುದೂ ಗೋಚರವಾಗುತ್ತದೆ. ಪ್ರಪಂಚವೆಲ್ಲಾ ಅತಿ ಪ್ರೇಮದಿಂದಲೂ ವಿಶಾಲವಾದ ಸಹಾನುಭೂತಿಯಿಂದಲೂ ಕೂಡಿದ ಜನರಿಂದ ತುಂಬಿದ್ದರೆ ಎಷ್ಟು ಚೆನ್ನಾಗಿರುತ್ತಿದ್ದಿತು! ಆದರೆ ಅಂತಹವರು ದೊರಕುವುದು ಬಹಳ ವಿರಳ. ವಿದ್ಯಾವಂತರಾದ ಜನರನ್ನು ತಿದ್ದಿ ಇಷ್ಟ ನಿಷ್ಠೆಯ ದಾರಿಯನ್ನು ಅವರಿಗೆ ಬೋಧಿಸುವುದರಿಂದ ಈ ಧ್ಯೇಯವು ಸಾಧ್ಯವಾಗಲು ಅವಕಾಶವಾಗುವುದು. ಎಲ್ಲಾ ಮತಗಳೂ ತತ್ವಬೋಧೆ ಗಳೂ, ತಮ್ಮ ತಮ್ಮ ಗುರಿಯನ್ನು ಮಾತ್ರ ಜನರಿಗೆ ತೋರಿಸುತ್ತವೆ. ಆದರೆ ಶಾಶ್ವತವಾದ ವೇದಾಂತಧರ್ಮವು ಭಗವಂತನ ಸನ್ನಿಧಿಯ ಅಸಂಖ್ಯಾತವಾದ ಬಾಗಿಲುಗಳನ್ನು ತೆರೆಯುತ್ತದೆ. ವೇದಾಂತವು ಜಗ ತ್ತಿನ ಎದುರಿಗೆ ಭಗವಂತನ ಪ್ರತಿರೂಪಗಳಾದ ಅಸಂಖ್ಯಾತಗಳಾದ ಧ್ಯೇಯಗಳ ರಾಸಿಯನ್ನೇ ಹರಡುತ್ತದೆ. ವೇದಾಂತವು ದಯೆಯಿಂದಲೂ ನೀಡಿದ ಕೈಯಿಂದಲೂ, ಮನುಷ್ಯ ಜೀವನದ ಕಾನನದಲ್ಲಿ ಧರ್ಮಗುರು ಗಳು ಕೆತ್ತಿಮಾಡಿರುವ ಸ್ಪಷ್ಟವಾದ ದಾರಿಯನ್ನು ತೋರಿಸುತ್ತದೆ. ಭಗ ವಂತನ ಅವತಾರಗಳಾದ ಧರ್ಮಗುರುಗಳ ದಾರಿಯನ್ನು ತೋರಿಸಿ, ಜೀವನನ್ನು ಮಾಯೆಯ ಬಲೆಯಿಂದ ಬಿಡುಗಡೆಮಾಡಿ ಶಾಶ್ವತವಾದ ಸ್ವಾತಂತ್ರ್ಯ ಮತ್ತು ಆನಂದದ ತವರಾದ ಪರಮಾತ್ಮನಲ್ಲಿ ಅದನ್ನು ನಿಲ್ಲಿ ಸುತ್ತದೆ.

ಆದುದರಿಂದ ಮುಕ್ತಿಗೆ ಸಾಧಕಗಳಾದ ಯಾವ ದಾರಿಗಳನ್ನೂ ನಾವು ಇಲ್ಲವೆನ್ನಕೂಡದು. ಮತ್ತು ಆ ದಾರಿಗಳನ್ನು ದ್ವೇಷಿಸಲೂ ಕೂಡದು. ಇದೇ ಭಕ್ತಿಯೋಗದ ಆಜ್ಞೆ. ಆದರೆ ಬೆಳೆಯುತ್ತಿರುವ ಎಳೆಯ ಗಿಡವನ್ನು ಮರವಾಗಿ ಬಲಿಯುವ ವರೆಗೆ ಬೇಲಿಹಾಕಿ ಸಂರಕ್ಷಿಸುವುದು ಹೇಗೆ ಆವಶ್ಯಕವೋ ಹಾಗೆಯೇ ಆತ್ಮಜ್ಞಾನದ ಕೋಮಲವಾದ ಗಿಡವನ್ನೂ ಬಾಲ್ಯದೆಸೆಯಲ್ಲಿ ಅನೇಕ ಧ್ಯೇಯಗಳ ತಿಕ್ಕಾಟಕ್ಕೆ ಸಿಗದಂತೆ ಸಂರಕ್ಷಿಸುವುದು ಆವಶ್ಯಕವಾಗಿದೆ. ವಿಶಾಲವಾದ ಧರ್ಮದೃಷ್ಟಿ ಎಂಬ ಹೆಸರಿನಿಂದ ಅನೇಕರು ತಮ್ಮ ಕೆಲಸವಿಲ್ಲದ ಮನಸ್ಸನ್ನು ಬಗೆಬಗೆಯ ಧ್ಯೇಯಗಳಿಂದ ಉತ್ಸುಕತೆಯಿಂದ ತುಂಬಿಕೊಳ್ಳುತ್ತಾರೆ. ಅಂಥವರಿಗೆ ಹೊಸ ವಿಷಯಗಳನ್ನು ಕೇಳುವುದೇ ಒಂದು ಔತಣ. ಕ್ಷಣಿಕವಾದ ಸ್ಫೂರ್ತಿಯೂ ಉತ್ಸಾಹವೂ ಉಂಟಾಗಲೆಂದು ಅವರು ಹೊಸ ಹೊಸ ವಿಷಯಗಳನ್ನು ಕೇಳಬಯಸುತ್ತಾರೆ. ಆ ಸ್ಫೂರ್ತಿಯು ಮುಗಿದ ಕೂಡಲೆ ಅವರಿಗೆ ಮತ್ತೊಂದು ಹೊಸ ಸ್ಫೂರ್ತಿಯು ಬೇಕಾಗುತ್ತದೆ. ಅಂಥವರಿಗೆ ಮತ ಅಥವ ಧರ್ಮವು ಅಫೀಮಿನ ಸೇವನೆಯಂತೆ. ಅಲ್ಲಿಗೆ ಧರ್ಮದ ಕೊನೆ. ಮತ್ತೊಂದು ಬಗೆಯ ಜನ ಮುತ್ತಿನ ಚಿಪ್ಪಿನ ಕಪ್ಪೆಯಂತೆ. ಕಪ್ಪೆಯು ಸ್ವಾತಿಮಳೆಯ ಹನಿಗಾಗಿ ಸಮುದ್ರದ ತಳವನ್ನು ಬಿಟ್ಟು ಮೇಲಕ್ಕೆ ಬರುತ್ತದೆ. ಚಿಪ್ಪನ್ನು ತೆರೆದುಕೊಂಡು ಮಳೆಯ ಹನಿಗಾಗಿ ಅದು ಕಾಯುತ್ತಿದ್ದು ಹನಿಯು ದೊರಕಿದ ಕೂಡಲೆ ಮತ್ತೆ ಸಮುದ್ರದ ತಳಕ್ಕೆ ಹೋಗುತ್ತದೆ. ಆ ಹನಿಯನ್ನು ಸುಂದರವಾದ ಮುತ್ತಾಗಿಮಾಡುವವರೆಗೆ ತಳದಲ್ಲೇ ಇರುತ್ತದೆ'' ಎಂಬುದಾಗಿ ಭಗವಾನ್ ರಾಮಕೃಷ್ಣರು ಹೇಳಿದ್ದಾರೆ.

ಭಗವಾನ್ ರಾಮಕೃಷ್ಣರು ಹೇಳಿರುವುದು ಕಾವ್ಯದ ರೀತಿ. ಇಷ್ಟನಿಷ್ಠ ತತ್ವವನ್ನು ಶಕ್ತವಾದ ವಾಕ್ಯಸರಣಿಯಲ್ಲಿ ಹೇಳುವ ರೀತಿ. ಭಕ್ತಿಯ ಅಭ್ಯಾಸದಲ್ಲಿ ಪ್ರಾರಂಭದೆಸೆಯಲ್ಲಿರುವವರಿಗೆ ಏಕನಿಷ್ಠೆಯು ಅತ್ಯಾವಶ್ಯಕ. ಅವನು ರಾಮಾಯಣದಲ್ಲಿ ಹನುಮಾನ್ ಹೇಳಿದಂತೆ ಶ್ರೀರಾಮಚಂದ್ರನೂ, ಶ್ರೀಪತಿಯಾದ ವಿಷ್ಣುವೂ ಇಬ್ಬರೂ ಒಂದೇ

ಎಂದು ನನಗೆ ತಿಳಿದಿದ್ದರೂ ನನ್ನ ಸರ್ವಸ್ವವೂ ಕಮಲಲೋಚನನಾದ ರಾಮನೆ" † ಎಂದು ಹೇಳಬೇಕಾಗುತ್ತದೆ. ಅಥವ ತುಳಸಿದಾಸನು ಹೇಳಿರುವಂತೆ ‡ "ಎಲ್ಲದರ ಸವಿಯನ್ನೂ ಆಸ್ವಾದಿಸು. ಎಲ್ಲರೊಂದಿಗೂ ಕೂಡು; ಎಲ್ಲರ ಹೆಸರನ್ನೂ ತೆಗೆದುಕೊ. ಆದರೆ ನಿನ್ನ ಸ್ಥಳವನ್ನು ಮಾತ್ರ ಬಿಡದೆ ಗಟ್ಟಿಯಾಗಿ ಹಿಡಿದುಕೊ" ಭಕ್ತನಿಗೆ ನಿಜವಾದ ಶ್ರದ್ಧೆಯಿದ್ದರೆ, ಸಣ್ಣ ಬೀಜದಿಂದ ಹುಟ್ಟಿ ಸುತ್ತಲೂ ಅಸಂಖ್ಯಾತವಾದ ವಿಶಾಲವಾದ ಕೊಂಬೆಗಳನ್ನೂ ಬಿಳಲುಗಳನ್ನೂ ಪಸರಿಸುವ ದೊಡ್ಡ ಆಲದ ಮರದಂತೆ ಅವನು ಬೆಳೆಯುತ್ತಾನೆ. ಕೊನೆಯಲ್ಲಿ ಆ ಭಕ್ತನಿಗೆ ತನ್ನ ಜೀವಮಾನ ವೆಲ್ಲಾ ಯಾವುದು ತನ್ನ ಗುರಿಯಾಗಿದ್ದಿತೋ ಅದೇ ಎಲ್ಲಾ ಮತಗಳಿಗೂ ಗುರಿಯೆಂದೂ ಅದೇ ಬೇರೆಬೇರೆ ಹೆಸರಿನಲ್ಲೂ ರೂಪದಲ್ಲೂ ಎಲ್ಲರಿಂದಲೂ ಪೂಜಿಸಲ್ಪಡುವುದೆಂದೂ ಅವನಿಗೆ ಚೆನ್ನಾಗಿ ಗೊತ್ತಾಗುವುದು.

## ೧೦ ರೀತಿ ಮತ್ತು ಸಾಧನೆ

ಭಕ್ತಿಯ ದಾರಿ ಮತ್ತು ಕ್ರಮವನ್ನು ಕುರಿತು ಭಗವಾನ್ ರಾಮಾನುಜರು ವೇದಾಂತಸೂತ್ರಗಳ ವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ: "ಬ್ರಹ್ಮದ ಜ್ಞಾನವು ವಿವೇಕ, ಅರಿಷಡ್ವರ್ಗಗಳನ್ನು ಜಯಿಸುವುದು, ಸತತ ಪ್ರಯತ್ನ, ತ್ಯಾಗ, ಪಾರಿಶುದ್ಧ್ಯ, ಬಲ ಮತ್ತು ಮಿತಿಮೀರಿದ ಆನಂದವನ್ನು ತಡೆಯುವುದು ಇವುಗಳಿಂದ ಉಂಟಾಗುತ್ತದೆ." ರಾಮಾನುಜರ ಅಭಿಪ್ರಾಯದಂತೆ ವಿವೇಕವೆಂದರೆ, ಉಳಿದ ವಿಚಾರಗಳಲ್ಲಿರುವಂತೆ ಆಹಾರದಲ್ಲೂ ವಿವೇಕವಿರಬೇಕು. ಶುದ್ಧವಾದ ಆಹಾರ ಮತ್ತು ಅಶುದ್ಧವಾದ ಆಹಾರ ಇವುಗಳಿಗೆ ಇರುವ ವ್ಯತ್ಯಾಸವನ್ನು ತಿಳಿಯ

† ಶ್ರೀನಾಥೇ ಜಾನಕೀನಾಥೇ ಅಭೇದಃ ಪರಮಾತ್ಮನಿ
ತಥಾಪಿ ಮಮ ಸರ್ವಸ್ವೋ ರಾಮಃ ಕಮಲಲೋಚನಃ

‡ ಸಬ್‌ಸೆ ಬಸಿಯೆ ಸಬ್‌ಸೆ ರಸಿಯೆ ಸಬ್‌ಕಾ ಲೀಜಿಯೆ ನಾಯ್
ಹಾಜಿ ಹಾಜಿ ಕರತೆ ರಹಿಯೆ ಬೈಠಿಯೆ ಅಪನಾ ಠಾಯ್

ಬೇಕು. ರಾಮಾನುಜರ ಅಭಿಪ್ರಾಯದಂತೆ ಆಹಾರವು ಮೂರು ಕಾರಣಗಳಿಂದ ಅಶುದ್ಧವಾಗುತ್ತದೆ. ಮೊದಲನೆಯ ಕಾರಣವು ಆಹಾರಕ್ಕೇ ಸಂಬಂಧಪಟ್ಟುದು. ಬೆಳ್ಳುಳ್ಳಿ ಮುಂತಾದುವು. ಎರಡನೆಯ ಕಾರಣವು ದುಷ್ಟರಿಂದ ಬರುವುದು. ಮೂರನೆಯದು ಆಹಾರದಲ್ಲಿರುವ ಕೊಳೆ, ಕೂದಲು ಮೊದಲಾದವುಗಳಿಂದ ಅದು ಅಶುದ್ಧವಾಗುವುದು. ಛಾಂದೋಗ್ಯ ಉಪನಿಷತ್ತಿನಲ್ಲಿ "ಶುದ್ಧವಾದ ಆಹಾರದಿಂದ ದೇಹದಲ್ಲಿರುವ ಸಾತ್ವಿಕ ಪ್ರವೃತ್ತಿಗಳು ಶುದ್ಧವಾಗುವುವು. ಸಾತ್ವಿಕ ಪ್ರವೃತ್ತಿಗಳು ಶುದ್ಧವಾದರೆ ಜ್ಞಾಪಕಶಕ್ತಿಯು (ಸ್ಮೃತಿ) ಬಹಳ ಚೆನ್ನಾಗುತ್ತದೆ"† ಎಂಬುದಾಗಿ ಹೇಳಿದೆ.

ಆಹಾರದ ವಿವೇಕವು ಭಕ್ತರಿಗೆ ಯಾವಾಗಲೂ ದೊಡ್ಡ ಸಮಸ್ಯೆಯಾಗಿದೆ. ಕೆಲವು ಪಂಗಡದ ಭಕ್ತರು ಆ ದಾರಿಯಲ್ಲಿ ಮಿತಿಮೀರಿ ಹೋಗಿರುವುದು ನಿಜವಾದರೂ ಆಹಾರದ ಪ್ರಶ್ನೆಯು ಬಹಳ ಮಹತ್ತರವಾದುದೆನ್ನುವುದರಲ್ಲಿ ಸಂದೇಹವಿಲ್ಲ. ಸಾಂಖ್ಯತತ್ವಗಳಿಗೆ ಅನುಸಾರವಾಗಿ "ಪ್ರಕೃತಿಯಲ್ಲಿ ಸತ್ವ, ರಜಸ್, ತಮಸ್ ಇವು ಅಡಕವಾಗಿವೆ. ಪ್ರಕೃತಿಯು ಮತ್ತೊಂದು ರೂಪವಾದ, ಸೃಷ್ಟಿಯಾದ ಬ್ರಹ್ಮಾಂಡವು ಪ್ರಕೃತಿಯ ಗುಣಕ್ಕೆ ಅನುಸಾರವಾಗಿರುತ್ತದೆ. ಅಂದರೆ ಮನುಷ್ಯನ ಸೃಷ್ಟಿಗೆ ಉಪಯೋಗಿಸಲ್ಪಡುವ ಎಲ್ಲಾ ವಸ್ತುಗಳೂ ಅದರಿಂದಲೇ ಬರುತ್ತವೆ. ಆದುದರಿಂದ ಆತ್ಮಜ್ಞಾನದ ವಿಕಾಸಕ್ಕೆ ಶುದ್ಧವಾದ ಆಹಾರವು ಅತ್ಯಂತ ಆವಶ್ಯಕವಾದುದು. ನಾವು ತೆಗೆದುಕೊಳ್ಳುವ ಆಹಾರದ ಮೂಲಕ ನಮ್ಮ ದೇಹವನ್ನು ಪ್ರವೇಶಿಸುವ ವಸ್ತುಗಳು ನಮ್ಮ ಮಾನಸಿಕ ದೇಹದ ಬೆಳವಣಿಗೆಯಲ್ಲಿ ಬಹಳ ಮುಖ್ಯವಾದುವು. ನಮ್ಮ ಆಹಾರದ ವಿಷಯದಲ್ಲಿ ನಮಗೆ ಸರಿಯಾದ ವಿವೇಕವು ಇರಬೇಕಾದುದು ಆವಶ್ಯಕ. ಈ ವಿಚಾರದಲ್ಲಿ ಶಿಷ್ಯರು ಮಿತಿಮೀರಿ ಅಂಧರಾಗಿ ನಡೆದರೆ ಆ ತಪ್ಪು ಗುರುಗಳದಲ್ಲ.

ಒಟ್ಟಿನಲ್ಲಿ ಆಹಾರದ ವಿವೇಕವು ಅಷ್ಟೇನೂ ಅತಿ ಪ್ರಾಮುಖ್ಯ

† ಆಹಾರಶುದ್ಧೌ ಸತ್ವಶುದ್ಧಿಃ ಸತ್ವಶುದ್ಧೌ ಧ್ರುವಾಸ್ಮೃತಿ (ಛಾಂದೋಗ್ಯ ೭-೨೧)

ವಾದುದಲ್ಲ. ರಾಮಾನುಜರ ವ್ಯಾಖ್ಯೆಗೆ ಮೂಲವಾದ ಉಪನಿಷತ್ ವಾಕ್ಯಕ್ಕೆ ಶಂಕರರು ತಮ್ಮ ಭಾಷ್ಯದಲ್ಲಿ ಬೇರೆ ಅರ್ಥವನ್ನು ಕೊಟ್ಟಿದ್ದಾರೆ. ಆಹಾರ ಎಂಬ ಪದಕ್ಕೆ ಸಾಧಾರಣವಾಗಿ ಅನ್ನವೆಂದು ತಾನೆ ಅರ್ಥ. ಆದರೆ ಶಂಕರರು ಆಹಾರಕ್ಕೆ ಶೇಖರಿಸುವುದು ಸೇರಿಸಿಕೊಳ್ಳುವುದು ಎಂಬ ಅರ್ಥವನ್ನು ಕೊಟ್ಟಿದ್ದಾರೆ. "ಪಂಚೇಂದ್ರಿಯಗಳ ಮೂಲಕ ಉಂಟಾಗುವ ಧ್ವನಿ, ವಾಸನೆ ಇತ್ಯಾದಿಗಳನ್ನು ಮನಸ್ಸು ತನ್ನ ಸುಖಕ್ಕಾಗಿ ಕೂಡಿಸಿಕೊಳ್ಳುತ್ತದೆ. ಈ ಅನುಭವಗಳಿಂದ ಬರುವ ಜ್ಞಾನದ ಶುದ್ಧಿಯೇ ಶುದ್ಧವಾದ ಆಹಾರವೆನ್ನುವುದು. ಆದುದರಿಂದ ಶುದ್ಧವಾದ ಆಹಾರವೆಂದರೆ ಆಸೆ, ಬಂಧನ, ದ್ವೇಷ, ಮಾಯೆ ಮುಂತಾದವುಗಳಿಂದ ಬಿಡಲ್ಪಟ್ಟ ಜ್ಞಾನವನ್ನು ಸಂಪಾದನೆ ಮಾಡುವುದು. ಈ ರೀತಿಯಾಗಿ ಆಹಾರವು ಪರಿಶುದ್ಧವಾದ ಕೂಡಲೆ ಅಂತಃಕರಣದಲ್ಲಿ ಸತ್ವವು ಹೆಚ್ಚಾಗಿ ಸೇರುತ್ತದೆ. ಜ್ಞಾನಗಳಿಗೆ ತವರಾದ ಅಂತಃಕರಣದಲ್ಲಿ ಹೀಗೆ ಸತ್ವವು ಸೇರಿದ ಕೂಡಲೆ ವೇದಗಳಲ್ಲಿ ಓದಿ ತಿಳಿದಿರತಕ್ಕ ಪರಮಾತ್ಮನ ಜ್ಞಾನವು ಮನಸ್ಸಿಗೆ ಅವಿಚ್ಛಿನ್ನವಾಗಿ ಉಂಟಾಗುತ್ತದೆ."

ಆಹಾರ ಶಬ್ದಕ್ಕೆ ಶಂಕರರೂ ರಾಮಾನುಜರೂ ಇಬ್ಬರೂ ಕೊಟ್ಟಿರತಕ್ಕ ಅರ್ಥಗಳು ಸತ್ಯವಾದುವು; ಮತ್ತು ಅವಶ್ಯಕವಾದುವು. ಸೂಕ್ಷ್ಮ ಶರೀರವನ್ನು ಆಳುವುದು ನಿಸ್ಸಂದೇಹವಾಗಿ ನಮ್ಮ ಭೌತದೇಹವನ್ನು ಆಳುವುದಕ್ಕಿಂತ ಕಷ್ಟವಾದುದು. ಆದರೆ ಸೂಕ್ಷ್ಮ ಶರೀರವನ್ನು ಆಳಲು ಶಕ್ತಿ ಬರಬೇಕಾದರೆ ಭೌತಶರೀರವನ್ನು ಆಳುವುದು ಅತ್ಯವಶ್ಯಕ. ಆದುದರಿಂದ ಪ್ರಾರಂಭದೆಸೆಯಲ್ಲಿರತಕ್ಕವರು ಆಹಾರದ ವಿಷಯದಲ್ಲಿ ಭಕ್ತಿ ಮಾರ್ಗದ ಗುರುಗಳು ನಿರ್ಣಯಿಸಿರತಕ್ಕ ಎಲ್ಲಾ ನಿಯಮಗಳನ್ನೂ ಅನುಸರಿಸಬೇಕು. ಆದರೆ ಹಿಂದುದೇಶದ ಅನೇಕ ಮತಗಳಲ್ಲಿ ಕಾಣುವ ಧರ್ಮವನ್ನು ಅಡಿಗೆಮನೆಯಲ್ಲಿ ಸೆರೆಯಿರಿಸಿರುವ ಅರ್ಥರಹಿತವಾದ ಮಿತಿಮೀರಿದ ನಿಯಮಗಳಿಗೂ, ಭೌತವಾದಕ್ಕೂ ಏನೂ ವ್ಯತ್ಯಾಸವೇ ಇಲ್ಲ. ಅದು ಜ್ಞಾನವೂ ಅಲ್ಲ, ಭಕ್ತಿಯೂ ಅಲ್ಲ, ಕರ್ಮವೂ ಅಲ್ಲ. ಅದೊಂದು ಬಗೆಯಾದ ಹುಚ್ಚು. ಯಾರು ಆ ಹುಚ್ಚಿಗೆ ಅಂಟಿಕೊಂಡಿರು

ತ್ತಾರೋ ಅವರು ಬ್ರಹ್ಮಲೋಕವೇ ಮುಂತಾದ ಉತ್ತಮ ಲೋಕ ಗಳಿಗೆ ಹೋಗುವುದರ ಬದಲು ಹುಚ್ಚಾಸ್ಪತ್ರೆಗೆ ಹೋಗುತ್ತಾರೆ. ಜ್ಞಾನಕ್ಕೆ ಆವಶ್ಯಕವಾದ ಮನೋಭಾವವು ಸುಲಭವಾಗಿ ಉಂಟಾಗುವು ದಿಲ್ಲವಾದುದರಿಂದ, ಅದನ್ನು ಉಂಟುಮಾಡಿಕೊಳ್ಳಲು ಆಹಾರದ ವಿಚಾರ ದಲ್ಲಿ ಆವಶ್ಯಕವಾದಷ್ಟು ವಿವೇಚನೆಯು ಇರಬೇಕೆಂಬುದು ಸಾಧು ವಾಗಿದೆ.

ಮುಂದೆ ಮಾಡಬೇಕಾದುದು ಇಂದ್ರಿಯನಿಗ್ರಹ. ಇಂದ್ರಿಯ ಗಳನ್ನು ತಡೆದು ಅವು ಚಾಪಲ್ಯಕ್ಕೆ ಒಳಗಾಗದಂತೆ ಇಚ್ಛಾಶಕ್ತಿಯನ್ನು ಬಲಪಡಿಸುವುದೇ ಧಾರ್ಮಿಕ ಸಂಸ್ಕೃತಿಯ ಮುಖ್ಯವಾದ ತಿರುಳು. ಅನಂತರ ಆತ್ಮಸಂಯಮನ ಮತ್ತು ತ್ಯಾಗವನ್ನು ಅಭ್ಯಾಸ ಮಾಡಿಕೊಳ್ಳ ಬೇಕು. ಸಾಧಕನಿಗೆ ಈ ಗುಣಗಳು ಇಲ್ಲದಿದ್ದರೆ, ಅವುಗಳ ಅಭ್ಯಾಸ ಮತ್ತು ಸ್ವಾಧೀನವುಂಟಾಗದಿದ್ದರೆ ಭಗವಂತನ ಸಾಕ್ಷಾತ್ಕಾರವಾಗುವು ದಿಲ್ಲ. ಮನಸ್ಸು ಯಾವಾಗಲೂ ದೇವರನ್ನೇ ಧ್ಯಾನಿಸುತ್ತಿರಬೇಕು. ಮೊದ ಮೊದಲು ಮನಸ್ಸನ್ನು ದೇವರಲ್ಲಿ ನಿಲ್ಲಿಸುವುದು ಬಹಳ ಕಷ್ಟವಾಗು ವುದು. ಆದರೆ ಅಭ್ಯಾಸವಾದಂತೆಲ್ಲಾ ಆ ಶಕ್ತಿಯು ಹೆಚ್ಚುವುದು. ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ "ಎಲೈ ಅರ್ಜುನನೆ, ಅಭ್ಯಾಸದಿಂದಲೂ ವೈರಾಗ್ಯದಿಂದಲೂ ಜಿತೇಂದ್ರಿಯತ್ವವು ಉಂಟಾಗುವುದು" ‡ ಎಂಬು ದಾಗಿ ಹೇಳಿದ್ದಾನೆ.

ಆದುದರಿಂದ ಸಾಧಕನು ಮೇಲೆ ಹೇಳಿದ ಎಲ್ಲಾ ಗುಣಗಳನ್ನೂ, ಅವು ಭಕ್ತಿಗೆ ಅತ್ಯಂತ ಸಾಧಕಗಳಾಗುವುದರಿಂದ, ಸಂಪಾದಿಸಿಕೊಳ್ಳ ಬೇಕು. ಆದರೆ ಇತರ ಕೆಲವು ಪದ್ಧತಿಗಳಲ್ಲಿ ಹೇಳಿರುವಂತೆ ಅವನು ಬರಿಯ ಕರ್ಮಗಳನ್ನು ಮಾತ್ರ ಮಾಡಕೂಡದು. ಯಾಕೆಂದರೆ ಆ ಕರ್ಮ ಗಳ ಮುಖ್ಯ ಉದ್ದೇಶವು ಈ ಲೋಕದಲ್ಲೂ ಪರಲೋಕದಲ್ಲೂ ಇಂದ್ರಿಯ ಸುಖಾನುಭವ ಮಾತ್ರವೇ ಆಗಿರುತ್ತದೆ. ಅದರಿಂದ ಮನುಷ್ಯನಿಗೆ ಬರ ಬರುತ್ತಾ ಬಂಧನಗಳು ಹೆಚ್ಚಾಗುವುವಲ್ಲದೆ ಅವನು ದೇವರಿಂದ ದೂರ

‡ ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೆ (ಗೀತಾ ೬-೩೫)

ವಾಗುತ್ತಾನೆ. ಯಜ್ಞಗಳ ವಿಚಾರದಲ್ಲಿ ಅವನು ಪಂಚಯಜ್ಞಗಳನ್ನು ಮಾಡಬೇಕೆ ಹೊರತು ಮತ್ತೇನನ್ನೂ ಮಾಡಕೂಡದು.

ಭಕ್ತಿ ಎಂಬ ಕಟ್ಟಡಕ್ಕೆ ಪಾರಿಶುದ್ಧ್ಯವೆಂಬುದೇ ಮುಖ್ಯವಾದ ಅಡಿಗಲ್ಲು. ದೇಹವನ್ನು ಕೊಳೆಯಿಲ್ಲದಂತೆ ಇಟ್ಟುಕೊಳ್ಳುವುದೂ ಶುದ್ಧವಾದ ಆಹಾರವನ್ನು ತಿನ್ನುವುದೂ ಸುಲಭ. ಆದರೆ ಮನಸ್ಸು ಶುದ್ಧವಾಗದಿದ್ದರೆ ಅವುಗಳಿಂದ ಏನೂ ಪ್ರಯೋಜನವಿಲ್ಲ. ರಾಮಾನುಜರು ಪಾರಿಶುದ್ಧ್ಯಕ್ಕೆ ಈ ಕೆಳಗಿನ ಗುಣಗಳು ಅವಶ್ಯಕವಾದುವೆಂದು ಹೇಳಿದ್ದಾರೆ. ಸತ್ಯ, ಆರ್ಜವ, ದಯ, (ಲಾಭದ ಆಶೆಯಿಲ್ಲದೆ ಇತರರಿಗೆ ಒಳ್ಳೆಯದನ್ನು ಮಾಡುವುದು) ಅಹಿಂಸಾ, (ಮಾತಿನಿಂದಲೂ ಮನಸ್ಸಿನಿಂದಲೂ ಯೋಚನೆಯಿಂದಲೂ ಇತರರಿಗೆ ಹಿಂಸೆ ಮಾಡದಿರುವುದು) ಅಭಿಧ್ಯ, (ಇತರರ ವಸ್ತುಗಳನ್ನು ಅಪಹರಿಸದಿರುವುದು, ಕೆಟ್ಟ ಯೋಚನೆಗಳನ್ನು ಮಾಡದಿರುವುದು, ಇತರರು ಮಾಡಿದ ಅಪಕಾರವನ್ನು ಸ್ಮರಿಸದಿರುವುದು) ಇದರಲ್ಲಿ ಹೆಚ್ಚಾಗಿ ಲಕ್ಷ್ಯದಲ್ಲಿ ಇಡಬೇಕಾದುದು ಅಹಿಂಸೆ ಎಂಬುದು. ಭಕ್ತನು ಎಲ್ಲಾ ಪ್ರಾಣಿಗಳ ವಿಷಯದಲ್ಲೂ ಅಹಿಂಸಾ ತತ್ವವನ್ನೇ ಅವಲಂಬಿಸಬೇಕು. ನಮ್ಮಲ್ಲಿ ಕೆಲವರಲ್ಲಿ ಇರುವಂತೆ, ಅಹಿಂಸೆ ಎಂದರೆ ಮನುಷ್ಯನಲ್ಲಿ ಮಾತ್ರ ಅಹಿಂಸೆ. ಇತರ ಪ್ರಾಣಿಗಳಲ್ಲಿ ಕ್ರೌರ್ಯವೆಂದು ಅರ್ಥವಲ್ಲ. ಅಥವ ಇತರ ಕೆಲವರಲ್ಲಿ ಇರುವಂತೆ ಬೆಕ್ಕು ನಾಯಿಗಳ ಸಂರಕ್ಷಣೆ; ಇರುವೆಗಳಿಗೆ ಸಕ್ಕರೆಯ ಔತಣ. ಆದರೆ ಮನುಷ್ಯನ ವಿಚಾರದಲ್ಲಿ ಅಸಾಧ್ಯವಾದ ಕ್ರೌರ್ಯ ಇದಲ್ಲ. ಈ ಪ್ರಪಂಚದಲ್ಲಿ ಎಲ್ಲಾ ಒಳ್ಳೆ ಭಾವಗಳನ್ನೂ ಮಿತಿಮೀರಿ ಒಂದೇ ಕಡೆಗೆ ಎಳೆಯಬಹುದೆಂಬುದು ಆಶ್ಚರ್ಯಕರವಾದುದು. ಯಾವ ಒಳ್ಳೆ ಅಭಿಪ್ರಾಯವನ್ನೂ ಅತಿಯಾಗಿ ಎಳೆದು ಒಂದಕ್ಷರವನ್ನೂ ಬಿಡದೆ ಅದರಂತೆ ನಡೆದರೆ ಅದು ಕೆಡಕಾಗಿಯೇ ಪರಿಣಮಿಸುತ್ತದೆ. ಈ ನಿಯಮಕ್ಕೆ ಅಹಿಂಸೆಯ ತತ್ವವೂ ಹೊರತಾಗಿಲ್ಲವೆಂಬುದು ವಿಷಾದಕರವಾದ ಸಂಗತಿ. ತಮ್ಮ ದೇಹದ ಮೇಲಿರುವ ಹುಳುಗಳೂ ಕೂರೆಗಳೂ ಸಾಯುವವೆಂಬ ಭಯದಿಂದ ಸ್ನಾನವನ್ನೇ ಮಾಡದಿರುವ ಕೆಲವು ಮತಗಳ ಕೊಳಕು ಸನ್ಯಾಸಿಗಳು ತಮ್ಮಿಂದ ಇತರರಿಗೆ ಆಗುವ ಹಿಂಸೆಗಳನ್ನು

ಗಣನೆಗೇ ತೆಗೆದುಕೊಳ್ಳುವುದಿಲ್ಲ. ಆದರೆ ಆ ಪಂಗಡದವರು ವೇದ ಮತಕ್ಕೆ ಸೇರಿದವರಲ್ಲವೆಂಬುದೇ ಒಂದು ಶುಭಸಮಾಚಾರ.

ಅಸೂಯೆಯಿಲ್ಲದಿರುವುದೇ ಅಹಿಂಸೆಯ ಒರೆಗಲ್ಲು. ಯಾವ ಮನುಷ್ಯನಾದರೂ ಯಾವುದೋ ಒಂದು ಗಳಿಗೆಯಲ್ಲಿಯೋ, ಮೂಢ ನಂಬಿಕೆಯಿಂದಲೊ ಅಥವ ಅರ್ಚಕ ಪುರೋಹಿತರ ತಂತ್ರಗಳಿಗೆ ಒಳ ಗಾಗಿಯೋ ಒಂದು ಒಳ್ಳೆಯ ಕೆಲಸವನ್ನು ಮಾಡಬಹುದು. ಅಥವ ದೊಡ್ಡ ದಾನವನ್ನು ಮಾಡಬಹುದು. ಆದರೆ ಯಾರಿಗೆ ಯಾರಲ್ಲಿಯೂ ಅಸೂಯೆ ಇಲ್ಲವೋ ಅವನೇ ಮನುಷ್ಯಜಾತಿಯ ಮಿತ್ರನು. ಪ್ರಪಂಚ ದಲ್ಲಿ ದೊಡ್ಡವರೆನ್ನಿಸಿಕೊಳ್ಳುವವರು, ಹೆಸರು, ಪ್ರಸಿದ್ಧಿ, ಹಣ ಇವುಗಳಿ ಗಾಗಿ ಒಬ್ಬರಲ್ಲಿ ಒಬ್ಬರು ಅಸೂಯೆಪಡುವುದು ಕಣ್ಣಿಗೆ ಬೀಳುತ್ತದೆ. ಎಲ್ಲಿಯವರೆಗೆ ಈ ಅಸೂಯೆಯು ಅವರ ಹೃದಯದಲ್ಲಿ ಇರುತ್ತದೆಯೋ ಅಲ್ಲಿಯವರೆಗೆ, ಅವರು ಸಸ್ಯಾಹಾರಿಗಳೇ ಆಗಿದ್ದರೂ ಅಹಿಂಸಾಗುಣ ದಿಂದ ಅವರು ಬಹು ದೂರವಾಗಿದ್ದಾರೆ. ಹಸುವು ಮಾಂಸವನ್ನು ತಿನ್ನುವು ದಿಲ್ಲ. ಹಾಗೆಯೇ ಕುರಿಯೂ ತಿನ್ನುವುದಿಲ್ಲ. ಆದುದರಿಂದ ಅವು ದೊಡ್ಡ ಯೋಗಿಗಳೆ? ಅಹಿಂಸಾವಾದಿಗಳೆ? ಯಾವ ದಡ್ಡನೂ ಮಾಂಸವನ್ನು ತಿನ್ನುವುದನ್ನು ಬಿಡಬಹುದು. ಅಷ್ಟುಮಾತ್ರಕ್ಕೆ ಸಸ್ಯಾಹಾರಿಗಳಾದ ಪ್ರಾಣಿಗಳಿಗಿಂತ ಅವನಿಗೆ ಹೆಚ್ಚು ಪ್ರಶಸ್ತಿ ದೊರಕುವುದಿಲ್ಲ. ವಿಧವೆಯ ರನ್ನೂ ಅನಾಥರನ್ನೂ ಮೋಸಪಡಿಸಿ ಹಣಕ್ಕಾಗಿ ಯಾವ ಕೆಟ್ಟ ಕೆಲಸ ವನ್ನು ಬೇಕಾದರೂ ಮಾಡುವ ನಿಷ್ಕರುಣೆಯಾದ ಪುರುಷನು, ಬರಿಯ ಸಸ್ಯಾಹಾರಿಯೇ ಆದರೂ ಪಶುಗಳಿಗಿಂತ ಕೀಳಾದವನು. ಆದರೆ ಯಾವ ಮನುಷ್ಯನಿಗೆ ಇತರರ ವಿಷಯದಲ್ಲಿ ಕೆಟ್ಟ ಆಲೋಚನೆಯಿಲ್ಲವೋ ಯಾವನು ತನ್ನ ಮರಣಶತ್ರುವಿಗೆ ಕೂಡ ಶುಭವುಂಟಾದರೆ ಸಂತೋಷ ಪಡುವನೋ ಅವನೇ ನಿಜವಾದ ಭಕ್ತ ಮತ್ತು ಯೋಗಿ. ಪ್ರತಿದಿನವೂ ಅವನು ಹಂದಿಯ ಮಾಂಸವನ್ನೇ ತಿಂದು ಜೀವಿಸಿದರೂ ಅವನೇ ಎಲ್ಲರಿಗೂ ಗುರು. ಆದುದರಿಂದ ಬಾಹ್ಯ ಅಭ್ಯಾಸಗಳು ಮನಸ್ಸಿನ ಶುದ್ಧಿಗೆ ಮಾತ್ರ ಸಹಾಯಕವಾದುವೆಂದೂ ಆ ಅಭ್ಯಾಸಗಳನ್ನು ಒಂದು ಚೂರೂ ಬಿಡದೆ

ಅನುಸರಿಸುವುದು ಕಷ್ಟವಾದಾಗ ಮನಸ್ಸಿನ ಶುದ್ಧಿಯನ್ನು ಸಾಧಿಸಲು ಪ್ರಯತ್ನಪಡುವುದೇ ಉತ್ತಮವೆಂಬುದನ್ನೂ ನಾವು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಆದರೆ ಆತ್ಮಜ್ಞಾನದ ನಿಜವಾದ ತತ್ವವನ್ನೂ ತಿರುಳನ್ನೂ ಮರೆತು ಕೃತಕವಾದ ಬಹಿರಾಚಾರವನ್ನೇ ಬಿಡದೆ ಹಿಡಿದಿರುವ ಮನುಷ್ಯನಿಗೂ ದೇಶಕ್ಕೂ ಎಂದಿಗೂ ಮುಕ್ತಿಯಿಲ್ಲ. ಎಲ್ಲಿಯವರೆಗೆ ಆಚಾರಗಳು ಒಳಗಿನ ಚೇತನದ ಪ್ರತಿಬಿಂಬಗಳೋ ಅಲ್ಲಿಯವರೆಗೆ ಅವುಗಳಿಗೆ ಬೆಲೆಯುಂಟು. ಆದರೆ ಯಾವಾಗ ಅವು ಒಳಗಿನ ಜೀವನವನ್ನು ಪ್ರತಿಬಿಂಬಿಸುವುದನ್ನು ನಿಲ್ಲಿಸುತ್ತವೋ ಆಗ ಅವುಗಳನ್ನು ನಿಷ್ಕರುಣೆಯಿಂದ ತೊಡೆದುಹಾಕಬೇಕು.



ಮುಂದೆ ಭಕ್ತಿಯ ಸಾಧನೆಗೆ ಬೇಕಾದುದು ಬಲ.* ಶ್ರುತಿಯು ಬಲಹೀನರಿಗೆ ಆತ್ಮವು ಲಭ್ಯವಾಗುವುದಿಲ್ಲವೆಂದು † ಹೇಳಿದೆ. ಮೇಲಿನ ವಾಕ್ಯವು ದೇಹದ ಬಲಕ್ಕೂ ಮತ್ತು ಮನಸ್ಸಿನ ಬಲಕ್ಕೂ ಅನ್ವಯಿಸುತ್ತದೆ. ಬಲಿಷ್ಠರೂ ಶಕ್ತರೂ ಮಾತ್ರವೇ ಧರ್ಮದ ಶಿಷ್ಯರಾಗಲು ಅರ್ಹರು. ನಿಶ್ಶಕ್ತರೂ ನಿರ್ವೀರ್ಯರೂ ಆದ ಬಡಪಾಯಿಗಳಿಂದ ಏನು ತಾನೆ ಸಾಧ್ಯ? ಯೋಗದ ಅಭ್ಯಾಸದಿಂದ ದೇಹದೊಳಗೂ ಮನಸ್ಸಿನೊಳಗೂ ಅಡಗಿರತಕ್ಕ ಶಕ್ತಿಗಳು ಪ್ರಕಟವಾದ ಕೂಡಲೆ ಅವರು ಚೂರುಚೂರಾಗುವರು. ಯುವಕರಾಗಿ ಶಕ್ತರಾಗಿ ಬಲಿಷ್ಠರಾಗಿರುವವರೇ ಜಯಶಾಲಿಗಳಾಗಬಲ್ಲವರು. ಆದುದರಿಂದಲೇ ದೇಹದ ಬಲವು ಎಷ್ಟು ಆವಶ್ಯಕವೋ ಮನಸ್ಸಿನ ಬಲವೂ ಅಷ್ಟೇ ಆವಶ್ಯಕ. ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳಲು ಮಾಡುವ ಪ್ರಯತ್ನಗಳಿಂದ ದೇಹದಲ್ಲಿ ಉಂಟಾಗುವ ಶಕ್ತಿಗಳನ್ನು ಹಿಡಿತದಲ್ಲಿ ಇಡಬೇಕಾದರೆ ಬಲಿಷ್ಠರಾದವರಿಗೆ ಮಾತ್ರ ಸಾಧ್ಯ. ಭಕ್ತನಾಗಲು ಅಪೇಕ್ಷಿಸುವವನು ಆರೋಗ ದೃಢಕಾಯನಾಗಬೇಕು. ನಿಶ್ಶಕ್ತರಾದವರು ಯೋಗದ ಅಭ್ಯಾಸವನ್ನು ಪ್ರಾರಂಭಿಸಿದರೆ, ಗುಣವಾಗದ ರೋಗಗಳಿಗೆ ತುತ್ತಾಗುತ್ತಾರೆ. ಆದುದರಿಂದ ಬೇಕುಬೇಕೆಂತಲೇ ದೇಹವನ್ನು ನಿತ್ರಾಣವಾಗಿ ಮಾಡಿಕೊಳ್ಳುವುದು ಆತ್ಮಜ್ಞಾನಸಾಧನೆಗೆ ಮಾರ್ಗವಲ್ಲ.

---

* ಅನವಸಾದ. † ನಾಯಮಾತ್ಮಾ ಬಲಹೀನೇನ ಲಭ್ಯಃ (ಮುಂಡಕ ೩-೨)

ದುರ್ಬಲರಾದ ಮನಸ್ಸುಳ್ಳವರೂ ಸಹ ಆತ್ಮದ ಜ್ಞಾನವನ್ನು
ಹೊಂದುವುದರಲ್ಲಿ ಜಯಶೀಲರಾಗಲಾರರು. ಭಕ್ತನಾಗಬೇಕೆಂದು ಆಶಿಸು
ವವನು ಹಸನ್ಮುಖಿಯಾಗಿರಬೇಕು. ಅನೇಕರ ಅಭಿಪ್ರಾಯದಲ್ಲಿ ಧರ್ಮದ
ತಿರುಳು ಎಂದರೆ "ಸಾಧಕನು ನಗಕೂಡದು, ಮುಖವನ್ನು ಯಾವಾ
ಗಲೂ ಗಂಟು ಹಾಕಿಕೊಂಡೇ ಇರಬೇಕು; ಗದ್ದವು ಕಿತ್ತುಹೋಗು
ವಷ್ಟು ಮುಖವು ಉದ್ದವಾಗಿರಬೇಕು" ಎಂಬುದೇ ಆಗಿದೆ. ಆದರೆ ನನ್ನ
ಅಭಿಪ್ರಾಯದಲ್ಲಿ ದುರ್ಬಲರೂ ಹತವೀರ್ಯರೂ ಆದ ಅಂಥವರು ವೈದ್ಯ
ನಿಗೆ ಸೇರಿದವರೇ ಹೊರತು ಯೋಗಕ್ಕೆ ಸೇರಿದವರಲ್ಲ. ಹಸನ್ಮುಖಿಯಾದ
ಮನಸ್ಸಿಗೆ ಮಾತ್ರ ಸಾಧಿಸುವ ಶಕ್ತಿಯಿದೆ. ಸಾವಿರಾರು ತೊಂದರೆಗಳನ್ನು
ತೂರಿಕೊಂಡು ಹೋಗಬೇಕಾದರೆ ಶಕ್ತರಿಗೆ ಮಾತ್ರ ಸಾಧ್ಯ. ಯೋಗಾ
ಭ್ಯಾಸವೂ, ಮಾಯಾಜಾಲದಿಂದ ತಪ್ಪಿಸಿಕೊಳ್ಳುವುದೂ ಅತ್ಯಂತ ಕಷ್ಟ
ಸಾಧ್ಯವಾದ ಕೆಲಸ. ಅದು ತುಂಬ ಮನಶ್ಶಕ್ತಿಯುಳ್ಳ ಎಲ್ಲೋ ಕೆಲವರಿಗೆ
ಮಾತ್ರ ಕೈವಶವಾಗುವುದು. ಆದರೂ ಅತಿಯಾದ ಸಂತೋಷವನ್ನು
ಬಿಡಬೇಕು.

ಅತಿಯಾದ ಸಂತೋಷವು ನಮ್ಮ ಆಲೋಚನಾಶಕ್ತಿಯನ್ನು ನಾಶ
ಮಾಡುತ್ತದೆ. ಮತ್ತು ಮನಸ್ಸಿನ ಶಕ್ತಿಯನ್ನು ಚದುರಿಸುತ್ತದೆ. ಇಚ್ಛಾ
ಶಕ್ತಿಯು ಹೆಚ್ಚಿದಷ್ಟೂ ಇಂದ್ರಿಯಗಳಿಗೆ ವಶವಾಗುವುದು ಕಡಮೆ
ಯಾಗುತ್ತದೆ. ಆದುದರಿಂದ ಅತಿ ದುಃಖ ಮತ್ತು ಕಷ್ಟಾನುಭವದಿಂದ
ಆತ್ಮಜ್ಞಾನ ಸಾಧನೆಯು ಹೇಗೆ ಕಷ್ಟವೋ ಹಾಗೆಯೇ ಅತಿ ಸಂತೋಷ
ವಿನೋದದಿಂದಲೂ ಅದು ಕಷ್ಟ. ಮನಸ್ಸು ಶಾಂತವಾಗಿ ಒಂದೇ ತೂಕ
ದಲ್ಲಿರುವಾಗ ಮಾತ್ರ ಅದು ಧರ್ಮದ ದಾರಿಯನ್ನು ಹಿಡಿಯುತ್ತದೆ.

ಭಕ್ತನು ಈ ಪ್ರಕಾರವಾಗಿ ಭಗವಂತನನ್ನು ಪ್ರೀತಿಸುವುದನ್ನು
ಕಲಿಯಲು ಪ್ರಾರಂಭಿಸಬೇಕು. ಇದಕ್ಕೆ ಗೌಣೀ ಭಕ್ತಿ ಅಥವ ಭಕ್ತಿಯ
ಸಿದ್ಧತೆ ಎಂದು ಹೆಸರು.

---

# ೧೧ ಸಾಧಕನ ತ್ಯಾಗ

ಭಕ್ತಿಯ ಸಿದ್ಧತೆ ಎನ್ನಬಹುದಾದ ಭಾಗವನ್ನು ಪೂರೈಸಿದುದಾಯಿತು. ಇನ್ನು ಪರಾಭಕ್ತಿಯ ವಿಷಯಕ್ಕೆ ಪ್ರವೇಶಿಸಲು ನಾವು ಸಿದ್ಧರಾಗಿದ್ದೇವೆ ಆದುದರಿಂದ ಅತ್ಯುತ್ಕೃಷ್ಟವಾದ ಭಕ್ತಿಗೆ ಸಾಧಕವಾದ ಸಿದ್ಧತೆಗಳನ್ನು ಕುರಿತು ನಾವು ನಿಶ್ಚಯಿಸಬೇಕು. ಸಿದ್ಧತೆಗಾಗಿ ಉಪಯೋಗಿಸುವ ದೇವರ ನಾಮಗಳು, ವಿಗ್ರಹಗಳು, ಕರ್ಮಗಳು ಗುರುತುಗಳು ಇವೆಲ್ಲಾ ಕೇವಲ ಮನಸ್ಸಿನ ಶುದ್ಧಿಗಾಗಿಯೇ ಎಂಬುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಎಲ್ಲಕ್ಕಿಂತ ಮುಖ್ಯವಾದ ಪರಿಶುದ್ಧಿ ಎಂದರೆ ತ್ಯಾಗ ಈ ತ್ಯಾಗವಿಲ್ಲದವರು ಯಾರೂ ಜ್ಞಾನ ಮತ್ತು ಧರ್ಮದ ಪ್ರಪಂಚಕ್ಕೆ ಪ್ರವೇಶಿಸಲಾರರು. ತ್ಯಾಗ ಎಂದಕೂಡಲೆ ಅನೇಕರು ಹೆದರುತ್ತಾರೆ. ಆದರೂ ತ್ಯಾಗವಿಲ್ಲದಿದ್ದರೆ ಜ್ಞಾನದ ಬೆಳವಣಿಗೆಯುಂಟಾಗುವುದಿಲ್ಲ. ಎಲ್ಲಾ ಯೋಗಗಳಿಗೂ ತ್ಯಾಗವು ಆವಶ್ಯಕ. ಅದೇ ಎಲ್ಲಾ ಆತ್ಮಜ್ಞಾನದ ಸಂಸ್ಕೃತಿಗೂ ಮೆಟ್ಟಿಲು ಮತ್ತು ಕೇಂದ್ರ. ಸೂಕ್ಷ್ಮವಾಗಿ ಹೇಳುವುದಾದರೆ ಧರ್ಮವೆಂಬುದು ತ್ಯಾಗದ ಹೊರತು ಮತ್ತೇನೂ ಅಲ್ಲ. ಮನುಷ್ಯನು ಪ್ರಾಪಂಚಿಕ ವಸ್ತುಗಳಿಂದ ಮನಸ್ಸನ್ನು ತಿರುಗಿಸಿ, ವಸ್ತುಗಳಿಗೆ ಅಂಟಿಕೊಂಡಿರುವ ತಾನು ಎಂದಿದ್ದರೂ ಮಣ್ಣಾಗುವೆನೆಂದು ತಿಳಿದು ಪ್ರಪಂಚದಿಂದ ವಿಮುಖನಾಗುವನೋ ಆಗಲೇ ತ್ಯಾಗವೂ ಧರ್ಮವೂ ಬೆಳೆಯಲು ಪ್ರಾರಂಭವಾಗುತ್ತದೆ. ತಾನು ಮಾಡಿದ ಕೆಲಸಗಳ ಫಲಗಳನ್ನು ತ್ಯಾಗಮಾಡುವುದು; ಆ ಫಲಗಳಿಗೆ ಅಂಟಿಕೊಳ್ಳದೆ ಇರುವುದು ಮತ್ತು ತನ್ನ ಕಾರ್ಯಗಳಿಗಾಗಿ ಈ ಪ್ರಪಂಚದಲ್ಲೂ ಇತರ ಲೋಕಗಳಲ್ಲೂ ಯಾವ ಪ್ರತಿಫಲವನ್ನೂ ಅಪೇಕ್ಷಿಸದೆ ಇರುವುದು; ಇದೇ ಕರ್ಮಯೋಗಿಯ ತ್ಯಾಗವು. ಪ್ರಕೃತಿಯು ಸೃಷ್ಟಿಯಾಗಿರುವುದು ಆತ್ಮಕ್ಕೆ ಅನುಭವವುಂಟಾಗುವುದಕ್ಕೆ. ಈ ಅನುಭವ ಬಂದ ಕೂಡಲೆ ಆತ್ಮವು ಎಂದೆಂದಿಗೂ ಬೇರೆಯಾದುದೆಂದೂ ಅದಕ್ಕೂ ಪ್ರಕೃತಿಗೂ ಇರುವ ಸಂಬಂಧವು ಸ್ವಲ್ಪಕಾಲ ಮಾತ್ರವೆಂದೂ ರಾಜಯೋಗಿಗೆ

ಗೊತ್ತಾಗುವುದು. ಈ ಕಾರಣಗಳಿಂದ ರಾಜಯೋಗಿಗೆ ತನ್ನ ಅನುಭವಗಳಿಂದಲೇ ತ್ಯಾಗದ ಮೊದಲನೆಯ ಪಾಠವು ಗೊತ್ತಾಗುವುದು. ಜ್ಞಾನಯೋಗಿಯ ತ್ಯಾಗವು ಅತಿ ಕಷ್ಟವಾದುದು. ಈ ಕಣ್ಣಿಗೆ ಕಾಣುವ ದೊಡ್ಡ ಪ್ರಪಂಚವೆಲ್ಲಾ ಮಾಯೆ ಎಂಬುದನ್ನು ಅವನು ಚೆನ್ನಾಗಿ ಮನಗಾಣಬೇಕಾಗುವುದು. ಪ್ರಕೃತಿಯಲ್ಲಿ ವ್ಯಕ್ತವಾಗಿರುವ ಎಲ್ಲಾ ಶಕ್ತಿಗಳೂ ಆತ್ಮಕ್ಕೆ ಸೇರಿದವು. ಪ್ರಕೃತಿಗೆ ಸೇರಿದುವಲ್ಲ ಎಂಬುದು ಅವನಿಗೆ ತಿಳಿಯಬೇಕು. ಪ್ರಾರಂಭದಿಂದಲೂ, ಎಲ್ಲಾ ಜ್ಞಾನವೂ ಎಲ್ಲಾ ಅನುಭವಗಳೂ ಆತ್ಮದಲ್ಲಿದೆಯೇ ಹೊರತು ಪ್ರಕೃತಿಯಲ್ಲಿ ಇಲ್ಲವೆಂಬುದನ್ನು ಅವನು ತಿಳಿಯಬೇಕು. ಆದುದರಿಂದ ಬರಿಯ ವಿವೇಕದಿಂದಲೇ ಅವನು ಎಲ್ಲಾ ಬಂಧನಗಳಿಂದಲೂ ತಪ್ಪಿಸಿಕೊಳ್ಳಬೇಕು. ಪ್ರಕೃತಿಯನ್ನೂ, ಅದರ ಬೇರೆ ಬೇರೆ ರೂಪಗಳನ್ನೂ ಅವನು ಅದೃಶ್ಯವಾಗಿಟ್ಟುಕೊಂಡು ತಾನೊಬ್ಬನೇ ಸತ್ಯವೆಂದು ನಿಲ್ಲಬೇಕು.

ತ್ಯಾಗಗಳಲ್ಲೆಲ್ಲಾ ಅತ್ಯಂತ ಸ್ವಾಭಾವಿಕವಾದುದು ಭಕ್ತಿಯೋಗಿಯ ತ್ಯಾಗ. ಇಲ್ಲಿ ನಾವು ಯಾವುದರಿಂದಲೂ ಅತಿ ಕಷ್ಟದಿಂದ ಬೇರೆಯಾಗಬೇಕಾಗಿಲ್ಲ. ಭಕ್ತನ ತ್ಯಾಗವು ಸುಲಭ ಸರಾಗ ಸರಳ. ನಮ್ಮ ಸುತ್ತಮುತ್ತಲ ವಸ್ತುಗಳು ಹ್ಯಾಗೆ ಸ್ವಾಭಾವಿಕವೋ ಹಾಗೆಯೇ ಸ್ವಾಭಾವಿಕ. ಈ ತ್ಯಾಗವು ಒಂದೊಂದು ಬಗೆಯ ವಿಕಟ ಸ್ವರೂಪದಿಂದ ನಿತ್ಯ ನಮ್ಮ ಕಣ್ಣಿಗೆ ಬೀಳುತ್ತದೆ. ಒಬ್ಬ ಮನುಷ್ಯನು ಒಬ್ಬ ಸ್ತ್ರೀಯನ್ನು ಪ್ರೀತಿಸಲು ಪ್ರಾರಂಭಿಸುತ್ತಾನೆ. ಸ್ವಲ್ಪ ದಿನಗಳು ಕಳೆದನಂತರ ಅವಳನ್ನು ಬಿಟ್ಟು ಮತ್ತೊಬ್ಬಳನ್ನು ಪ್ರೀತಿಸಲು ಪ್ರಾರಂಭಿಸುತ್ತಾನೆ. ಮೊದಲನೆಯವಳು ಸ್ವಾಭಾವಿಕವಾಗಿ ಅವನ ಮನಸ್ಸನ್ನು ಬಿಟ್ಟು ಹೊರಟುಹೋಗುತ್ತಾಳೆ. ಹಾಗೆಯೇ ಒಬ್ಬ ಸ್ತ್ರೀಯು ಒಬ್ಬ ಪುರುಷನನ್ನು ಪ್ರೀತಿಸುತ್ತಾಳೆ. ಕೆಲವು ಕಾಲದನಂತರ ಮತ್ತೊಬ್ಬನನ್ನು ಪ್ರೀತಿಸುತ್ತಾಳೆ. ಮೊದಲನೆಯವನು ಸ್ವಾಭಾವಿಕವಾಗಿ ಅವಳ ಮನಸ್ಸನ್ನು ಬಿಟ್ಟುಹೋಗುತ್ತಾನೆ. ಒಬ್ಬ ಮನುಷ್ಯನು ತನ್ನ ಪಟ್ಟಣವನ್ನು ಪ್ರೀತಿಸುತ್ತಾನೆ. ಅನಂತರ ತನ್ನ ದೇಶವನ್ನು ಪ್ರೀತಿಸುತ್ತಾನೆ. ಅವನ ಸಣ್ಣ ಪಟ್ಟಣದಲ್ಲಿ ಅವನಿಗಿದ್ದ

ಪ್ರೀತಿಯು ಸ್ವಾಭಾವಿಕವಾಗಿ ತನ್ನಷ್ಟಕ್ಕೆ ತಾನು ನಿಂತುಹೋಗುತ್ತದೆ. ಆನಂತರ ಪ್ರಪಂಚವನ್ನೇ ಪ್ರೀತಿಸಲು ಕಲಿಯುತ್ತಾನೆ. ಆಗ ತನ್ನ ದೇಶದಲ್ಲಿ ಮಾತ್ರವೇ ಇದ್ದ ಅವನ ಕುರುಡು ಪ್ರೇಮವು ಅವನಿಗೆ ಯಾವ ಕಷ್ಟವನ್ನೂ ಕೊಡದೆ ಅವನನ್ನು ಬಿಟ್ಟು ಹೋಗುತ್ತದೆ. ಅಸಂಸ್ಕೃತನಾದ ಮನುಷ್ಯನು ಇಂದ್ರಿಯ ಸುಖಗಳನ್ನೇ ಹೆಚ್ಚಾಗಿ ಪ್ರೀತಿಸುತ್ತಾನೆ. ಆದರೆ ಅವನು ಸಂಸ್ಕೃತನಾದಂತೆಲ್ಲ, ಇಂದ್ರಿಯ ಸುಖದ ಆಸೆಯು ಕಡಮೆಯಾಗಿ ಬುದ್ಧಿಯ ಆನಂದದಲ್ಲೇ ಅವನಿಗೆ ಪ್ರೀತಿಯು ಹೆಚ್ಚಾಗುತ್ತದೆ. ಆಹಾರವನ್ನು ಸ್ವೀಕರಿಸುವುದರಲ್ಲಿ ನಾಯಿ ಅಥವ ತೋಳಕ್ಕೆ ಎಷ್ಟು ಆನಂದವಾಗುವುದೋ ಮನುಷ್ಯನಿಗೆ ಅಷ್ಟು ಆನಂದವಾಗುವುದಿಲ್ಲ. ಆದರೆ ಬುದ್ಧಿಯ ಪರಿಶ್ರಮದಿಂದ ಮನುಷ್ಯನಿಗೆ ಉಂಟಾಗತಕ್ಕ ಆನಂದವು ನಾಯಿಗೆ ಎಂದೆಂದಿಗೂ ದೊರೆಯಲಾರದು. ಆನಂದವು ಮೊದಲು ಪಾಶವೀ ಆಸೆಗಳ ತೃಪ್ತಿಗೆ ಅಂಟಿಕೊಂಡಿರುತ್ತದೆ. ಆದರೆ ಒಂದು ಪ್ರಾಣಿಯು ಪಶುವಿನ ಮಟ್ಟದಿಂದ ಮೇಲಕ್ಕೆ ಏರಿದ ಕೂಡಲೆ ಈ ಬಗೆಯ ಆನಂದವು ಅದಕ್ಕೆ ಬೆಲೆಯಿಲ್ಲದುದಾಗುತ್ತದೆ. ಮನುಷ್ಯರಲ್ಲಿ, ಯಾವನು ಪ್ರಾಣಿಗಳಿಗೆ ಸಮಾನವಾಗಿದ್ದಾನೊ ಆ ಮನುಷ್ಯನಿಗೆ ಇಂದ್ರಿಯಗಳ ಸುಖದಲ್ಲಿ ಆನಂದ ಹೆಚ್ಚಾಗಿರುತ್ತದೆ. ಮನುಷ್ಯನು ಮೇಲಕ್ಕೆ ಏರುತ್ತಾ ಹೋದಂತೆಲ್ಲಾ ಬುದ್ಧಿಯ ಪರಿಶ್ರಮವೇ ಮುಂತಾದ ಇತರ ಮೇಲ್ತರದ ವ್ಯವಸಾಯದಲ್ಲಿ ಅವನಿಗೆ ಆನಂದವು ಹೆಚ್ಚಾಗುತ್ತದೆ. ಹಾಗೆಯೇ ಮನುಷ್ಯನು ಬುದ್ಧಿಗಿಂತ ಮೇಲ್ಪಟ್ಟ ಆತ್ಮಜ್ಞಾನದ ಮಟ್ಟಕ್ಕೆ ಏರಿದಾಗ ಅಲ್ಲಿ ದೈವಿಕ ಸ್ಫೂರ್ತಿಯ ಆನಂದವು ಅವನಿಗೆ ಅನುಭವವಾಗುತ್ತದೆ. ಅದಕ್ಕೆ ಹೋಲಿಸಿ ನೋಡಿದರೆ ಇಂದ್ರಿಯಗಳ ಮತ್ತು ಬುದ್ಧಿಯ ಆನಂದವು ಅತ್ಯಂತ ಅಲ್ಪವಾಗಿ ತೋರುತ್ತದೆ. ಹಾಗಾಗುವುದು ಸ್ವಾಭಾವಿಕವಾದುದು. ಚಂದ್ರನು ಪ್ರಕಾಶಿಸುತ್ತಿರುವಾಗ ನಕ್ಷತ್ರಗಳು ಮಂಕಾಗುತ್ತವೆ. ಸೂರ್ಯನು ಕಾಂತಿಯಿಂದ ಬೆಳಗಲು ಪ್ರಾರಂಭಿಸಿದಾಗ ಚಂದ್ರನೇ ಮಂಕಾಗುತ್ತಾನೆ ಭಕ್ತಿಯನ್ನು ಸಾಧಿಸಲು ಬೇಕಾಗುವ ವೈರಾಗ್ಯವು, ನಮ್ಮಲ್ಲಿರುವ ಯಾವುದನ್ನಾ

ದರೂ ನಾಶ ಮಾಡುವುದರಿಂದ ಉಂಟಾಗುವುದಿಲ್ಲ. ಹೇಗೆ ಹೆಚ್ಚು ಪ್ರಕಾಶವಾದ ಜ್ಯೋತಿಯ ಎದುರಿಗೆ ಸಣ್ಣ ಸಣ್ಣ ಸೊಡರುಗಳು ಕ್ರಮವಾಗಿ ಮಂಕಾಗಿ ಕೊನೆಗೆ ನಂದಿಹೋಗುತ್ತವೋ ಹಾಗೆಯೇ ಭಕ್ತಿಯ ಎದುರಿಗೆ ಇತರ ಪ್ರವೃತ್ತಿಗಳು ಕಣ್ಮರೆಯಾಗುತ್ತವೆ. ಭಕ್ತನ ಭಕ್ತಿಯಿಂದಲೇ ಅವನ ಇಂದ್ರಿಯಗಳ ಸುಖದಾಸೆಯೂ ಬುದ್ಧಿಯ ಸುಖದಾಸೆಯೂ ಮಂಕಾಗಿ ಕೊನೆಗೆ ಅವನನ್ನು ಬಿಟ್ಟು ಹೊರಟುಹೋಗುತ್ತವೆ. ಭಕ್ತನ ಪ್ರೇಮವು ಪೂರ್ಣವಾಗಿ ದೇವರಲ್ಲಿ ನೆಲಸಿದಾಗ ಅದಕ್ಕೆ ಪರಾಭಕ್ತಿ ಎಂದು ಹೆಸರು. ಈ ಮಟ್ಟವನ್ನು ಯಾವನು ಏರುತ್ತಾನೋ ಅವನಿಗೆ ದೇವರಲ್ಲಿ ರೂಪಗಳು ತೋರುವುದಿಲ್ಲ. ಕರ್ಮಗಳು, ಪುಸ್ತಕಗಳು, ವಿಗ್ರಹಗಳು, ದೇವರುಗಳು, ಚರ್ಚುಗಳು, ಜಾತಿಗಳು, ದೇಶ ಜನಾಂಗ ಯಾವುದೂ ಅವನನ್ನು ಬಂಧಿಸುವುದಿಲ್ಲ. ಎಲ್ಲವೂ ಅವನನ್ನು ಬಿಟ್ಟು ಹೋಗುತ್ತವೆ. ಅವನನ್ನು ಬಂಧಿಸುವುದು ಯಾವುದೂ ಉಳಿಯುವುದಿಲ್ಲ. ಹಡಗು ಮಂತ್ರದ ಬಂಡೆಯ ಹತ್ತಿರ ಬಂದ ಕೂಡಲೇ ಅದರ ಮೊಳೆಗಳೂ ಕಬ್ಬಿಣದ ಕಂಬಿಗಳೂ ಬೇರೆಬೇರೆಯಾಗಿ ಹೇಗೆ ಸ್ವತಂತ್ರವಾಯಿತೆಂದು ಕಥೆಯಲ್ಲಿ ಹೇಳಿದೆಯೋ ಹಾಗೆಯೇ ಭಕ್ತನೂ ಸ್ವತಂತ್ರನಾಗುತ್ತಾನೆ ಭಗವಂತನ ಕೃಪೆಯು ಬಂದು ಎಲ್ಲಾ ಬಂಧನಗಳನ್ನೂ ಸಡಲಿಸುತ್ತದೆ. ಆದುದರಿಂದ ಭಕ್ತಿಗೆ ಕಾರಣವಾದ ತ್ಯಾಗದಲ್ಲಿ ಕಾಠಿಣ್ಯವೂ, ತಿಕ್ಕಾಟವೂ, ನೀರಸವೂ ಮನಸ್ಸಿನ ಪ್ರವೃತ್ತಿಗಳನ್ನು ಅಮುಕಿ ತುಳಿದಿಡುವುದೂ ಏನೂ ಇಲ್ಲ. ಭಕ್ತನು ತನ್ನ ಭಾವನೆಗಳನ್ನು ತುಳಿದು ತಳದಲ್ಲಿ ಇಡಬೇಕಾದುದಿಲ್ಲ. ಅವುಗಳನ್ನು ಬಲಪಡಿಸಿ ತನ್ನ ಗುರಿಯಾದ ದೇವರ ಕಡೆಗೆ ಮಾತ್ರ ಅವುಗಳನ್ನು ತಿರುಗಿಸಬೇಕಾಗಿದೆ.

---

# ೧೨ ಪ್ರೇಮದ ಫಲವೇ ಭಕ್ತನಲ್ಲುಂಟಾಗುವ ತ್ಯಾಗ

ಪ್ರಕೃತಿಯಲ್ಲಿ ಎಲ್ಲಿ ನೋಡಿದರೂ ಪ್ರೇಮದ ಕೆಲಸವೇ ನಮಗೆ ಕಾಣಿಸುತ್ತದೆ. ಸಮಾಜದಲ್ಲಿ ಯಾವುದು ಒಳ್ಳೆಯದೋ ಯಾವುದು ಮಹತ್ತರವೂ ಗಂಭೀರವೂ ಸುಂದರವೂ ಆದುದೋ ಅದೆಲ್ಲಾ ಪ್ರೀತಿಯ ಕಾರ್ಯವೆ. ಮತ್ತೆ ಸಮಾಜದಲ್ಲಿ ಕೆಟ್ಟದ್ದು ಯಾವುದೋ ಕುರೂಪವಾದುದು ಯಾವುದೋ ಅದೂ ಪ್ರೇಮದ ಕೆಲಸವೆ. ಯಾಕೆಂದರೆ ಯಾವ ಭಾವನೆಗಳು ಪವಿತ್ರವಾದ ಪತಿಪತ್ನಿಯರ ಪ್ರೇಮವನ್ನು ಉದ್ದೀಪನಮಾಡುವುವೋ ಆ ಭಾವನೆಗಳೇ ಇಂದ್ರಿಯ ತೃಪ್ತಿಯ ಪಾಶವೀ ಆನಂದಕ್ಕೆ ಸಾಧಕವಾದ ಪ್ರೇಮವನ್ನೂ ಉದ್ದೀಪನೆ ಮಾಡುತ್ತವೆ. ಭಾವನೆಗಳು ಒಂದೇ ಬಗೆಯವು. ಆದರೆ ಅವುಗಳ ಪ್ರಕಾಶವು ಬೇರೆ ಬೇರೆಯವರಲ್ಲಿ ಬೇರೆ ಬೇರೆ ತರಹವಾಗುತ್ತವೆ. ತನ್ನಲ್ಲಿರುವ ಸಮಸ್ತ ವಸ್ತುಗಳನ್ನೂ ಬಡವರಾದ ಇತರರಿಗೆ ಭ್ರಾತೃಭಾವನೆಯಿಂದ ಕೊಡುವಂತೆ ಮಾಡುವುದೂ, ಇತರರನ್ನು ನಾಶಮಾಡಿ ಅವರಲ್ಲಿರುವುದನ್ನೆಲ್ಲಾ ತನಗೋಸ್ಕರ ದೋಚಿಕೊಳ್ಳುವಂತೆ ಮಾಡುವುದೂ ಎರಡೂ ಒಂದೇ ಬಗೆಯ ಪ್ರೇಮದ ಕೆಲಸ. ಮೊದಲನೆಯವನು ಇತರರನ್ನು ಪ್ರೀತಿಸುವಂತೆ ಎರಡನೆಯವನು ತನ್ನನ್ನೇ ಪ್ರೀತಿಸಿಕೊಳ್ಳುತ್ತಾನೆ. ತನ್ನನ್ನೇ ತಾನು ಪ್ರೀತಿಸಿಕೊಳ್ಳುವವನಲ್ಲಿ ಪ್ರೇಮವು ಹೋಗುತ್ತಿರುವ ಮಾರ್ಗ ಸರಿಯಾದುದಲ್ಲ. ಆದರೆ ಇತರರನ್ನು ಪ್ರೀತಿಸುವವನಲ್ಲಿ ಅದು ಸರಿಯಾದ ದಾರಿಯಲ್ಲಿ ಹೋಗುತ್ತಿದೆ. ಆಹಾರವನ್ನು ಬೇಯಿಸುವ ಬೆಂಕಿಯು ಮಗುವನ್ನೂ ಸುಡಬಹುದು. ತಪ್ಪು ಬೆಂಕಿಯದಲ್ಲ. ತಪ್ಪಿರುವುದು ಅದನ್ನು ಉಪಯೋಗಿಸುವ ಮಾರ್ಗದಲ್ಲಿ. ಆದುದರಿಂದ ಎರಡು ವ್ಯಕ್ತಿಗಳು ಒಬ್ಬರೊಬ್ಬರ ಸಹವಾಸವನ್ನೂ ಸನ್ನಿಧಾನವನ್ನೂ ಪೂರ್ಣವಾಗಿ ಬಯಸಿ ಕೊನೆಯಲ್ಲಿ ಇಬ್ಬರೂ ಒಂದಾಗಿ ಸೇರುವುದೇ ಪ್ರೇಮದ ಉಚ್ಚ ಮತ್ತು ನೀಚವಾದ ಪ್ರಕಟನೆಗಳ ಲಕ್ಷಣವೆಂದು ಹೇಳಬಹುದು. ಭಕ್ತಿಯೋಗವು ಉಚ್ಚ ಪ್ರೇಮದ ಶಾಸ್ತ್ರವು. ಪ್ರೇಮವನ್ನು ಆಳುವುದು ಹೇಗೆ, ಅದನ್ನು ಸರಿಯಾದ ದಾರಿಯಲ್ಲಿ ತೆಗೆದುಕೊಂಡು ಹೋಗುವುದು ಹೇಗೆ, ಅದಕ್ಕೆ ಒಂದು ಹೊಸ ಗುರಿಯನ್ನು

ಕಲ್ಪಿಸಿ ಆತ್ಮಾನಂದಕ್ಕೆ ಸಾಧಕವಾದ ಫಲಗಳನ್ನು ಅದರಿಂದ ಹೊಂದು ವುದು ಹೇಗೆ ಎಂಬುದನ್ನೆಲ್ಲಾ ಭಕ್ತಿಯು ನಮಗೆ ತೋರಿಸುತ್ತದೆ. ಭಕ್ತಿ ಯೋಗವು "ಬಿಟ್ಟುಬಿಡು" ಎಂದು ಹೇಳುವುದಿಲ್ಲ. ಅದು "ಪ್ರೀತಿಸು, ಉಚ್ಚವಾದ ಧ್ಯೇಯವನ್ನು ಪ್ರೀತಿಸು" ಎಂಬುದಾಗಿ ಹೇಳುತ್ತದೆ. ನಿನ್ನ ಪ್ರೇಮದ ಉದ್ದೇಶವು ಅದಾದರೆ ಅದರಲ್ಲಿರುವ ಅಲ್ಪ ಮತ್ತು ನೀಚವಾ ದುದೆಲ್ಲ ನಿನ್ನನ್ನು ಬಿಟ್ಟು ಹೋಗುತ್ತದೆ.

"ನೀನು ನನ್ನ ಪ್ರೇಮವೆಂಬುದರ ಹೊರತು ನಿನ್ನ ವಿಷಯದಲ್ಲಿ ಮತ್ತೇನನ್ನೂ ಹೇಳಲಾರೆ. ನೀನು ಸುಂದರ; ಬಹು ಸುಂದರ. ಸೌಂದರ್ಯವೇ ನೀನು." ಭಕ್ತರು ಯಾವಾಗಲೂ ಈ ರೀತಿಯಾಗಿ ಉದ್ಗಾರವನ್ನು ತೆಗೆದಿ ದ್ದಾರೆ. ಆದುದರಿಂದ ಈ ಯೋಗದಲ್ಲಿ ನಮಗೆ ಮುಖ್ಯವಾದುದು ಯಾವು ದೆಂದರೆ ನಮ್ಮಲ್ಲಿರುವ ಸೌಂದರ್ಯಾರಾಧನೆಯು ಭಗವಂತನ ಕಡೆಗೆ ತಿರು ಗಬೇಕೆಂಬುದು. ಮನುಷ್ಯರ ಮುಖದಲ್ಲೂ, ಆಕಾಶದಲ್ಲೂ ನಕ್ಷತ್ರಗಳಲ್ಲೂ ಚಂದ್ರನಲ್ಲೂ ಕಾಣುವ ಈ ಸೌಂದರ್ಯ ಯಾವುದು?

ಪ್ರಪಂಚವನ್ನೆಲ್ಲಾ ಆವರಿಸುವ ಭಗವಂತನ ಸೌಂದರ್ಯದ ಒಂದು ಪ್ರಕಟನೆ ಮಾತ್ರ ಅದು. ಯಾಕೆಂದರೆ ವೇದಗಳಲ್ಲಿ ಹೇಳಿರುವಂತೆ 'ಅವನು ಪ್ರಕಾಶಿಸುವುದರಿಂದ ಎಲ್ಲವೂ ಪ್ರಕಾಶಿಸುತ್ತದೆ. ಅವನ ಪ್ರಕಾಶದಿಂದ ಇತರ ವಸ್ತುಗಳಿಗೆ ಪ್ರಕಾಶವುಂಟಾಗುತ್ತದೆ. * ಭಕ್ತಿಯೋಗದ ಈ ಉಚ್ಚ ವಾದ ಮಟ್ಟವನ್ನು ಅನುಸರಿಸಿ, ನಿಮ್ಮ ಪ್ರೇಮಕ್ಕೆ ಸಣ್ಣ ವ್ಯಕ್ತಿಗಳನ್ನು ಗುರಿಯಾಗಿ ಮಾಡಿಕೊಳ್ಳುವುದನ್ನು ಮರೆತು ಬಿಡಿ. ಪ್ರಪಂಚದ ಆಸೆ ಗಳಿಗೆ ಅಂಟಿಕೊಳ್ಳಬೇಡಿ. ಮನುಷ್ಯ ಪ್ರಪಂಚವೆ ನಿಮ್ಮ ಎಲ್ಲಾ ಧ್ಯೇಯ ಗಳಿಗೂ ಕೇಂದ್ರವೆಂದು ತಿಳಿಯಬೇಡಿ. ಒಬ್ಬ ಸಾಕ್ಷಿಯಂತೆ, ವಿದ್ಯಾರ್ಥಿ ಯಂತೆ ನಿಂತುಕೊಂಡು ಪ್ರಕೃತಿಯ ಕಾರ್ಯಗಳನ್ನು ನೋಡಿ ಯಾವ ಮನು ಷ್ಯನೊಂದಿಗೂ ಯಾವ ಬಾಂಧವ್ಯವನ್ನೂ ಇಟ್ಟುಕೊಳ್ಳಬೇಡಿ. ಆ ರೀತಿ ಅನಾಸಕ್ತರಾಗಿ ಪ್ರಪಂಚದಲ್ಲಿ ಪ್ರೇಮದ ಆಟವನ್ನು ನೋಡಿ ಕೆಲವು ವೇಳೆ ಸಣ್ಣಪುಟ್ಟ ಕಾದಾಟ ತಿಕ್ಕಾಟ ಅವನತಿ ಇವು ಕಣ್ಣಿಗೆ ಬೀಳ

* ತಮೇವ ಭಾಂತಮನುಭಾತಿ ಸರ್ವಂ ।
ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ (ಕಠ ೨-೫-೧೫)

ಬಹುದು. ಆದರೆ ಅದು ಇನ್ನೂ ಉಚ್ಚವಾದ ಸತ್ಯವಾದ ಪ್ರೇಮದ ಸಾಧನೆ ಯಲ್ಲಿ, ದಾರಿಯಲ್ಲಿ ಸಿಕ್ಕುವ ತೊಡಕು. ದೂರದಲ್ಲಿ ನಿಂತುಕೊಂಡು, ಈ ಕಾದಾಟವೇ ಹೇಗೆ ಜನರನ್ನು ನಿಜವಾದ ಪ್ರೇಮದ ದಾರಿಗೆ ಕರೆದು ಕೊಂಡು ಹೋಗುವುದೆಂಬುದನ್ನು ನೋಡಿ ಪ್ರಪಂಚದ ಪ್ರವಾಹದಲ್ಲಿ ಸಿಕ್ಕಿರುವವನಿಗೆ ಅದರ ಹೋರಾಟವು ಅನುಭವವಾಗುತ್ತದೆ. ಆದರೆ ಪ್ರಪಂಚದಿಂದ ಹೊರಗೆ ಅನಾಸಕ್ತರಾಗಿ ಸಾಕ್ಷಿಗಳಂತೆ ನಿಂತು ನೋಡಿ ದಾಗ, ದೇವರು ಪ್ರೇಮದ ಮೂಲಕ ಲಕ್ಷಾಂತರ ದಾರಿಗಳಲ್ಲಿ ಪ್ರಕಾಶ ಮಾನವಾಗುವುದು ಗೊತ್ತಾಗುತ್ತದೆ.

"ಎಲ್ಲಿ ಸ್ವಲ್ಪವಾದರೂ ಆನಂದವಿದೆಯೋ ಆ ಆನಂದವೇ ಭಗವಂತ.* ನೀಚವಾದ ಪ್ರೇಮದಲ್ಲೂ ದಿವ್ಯ ಪ್ರೇಮದ ಹೊಳಕೆಯಿದೆ. ದೇವರಿಗೆ ಸಂಸ್ಕೃತದಲ್ಲಿ ಹರಿ ಎಂದು ಹೆಸರು. ಅಂದರೆ ಭಗವಂತನು ಎಲ್ಲಾ ವಸ್ತು ಗಳನ್ನೂ ತನ್ನ ಬಳಿಗೆ ಆಕರ್ಷಿಸುವನೆಂದು ಅರ್ಥ. ವಾಸ್ತವವಾಗಿ ಮನು ಷ್ಯನ ಹೃದಯವನ್ನು ಆಕರ್ಷಿಸುವ ಅರ್ಹತೆಯುಳ್ಳವನು ಅವನೊಬ್ಬನೆ. ಆತ್ಮವನ್ನು ಯಾರು ಆಕರ್ಷಿಸಬಲ್ಲರು? ಅವನೊಬ್ಬನೆ! ನಿರ್ಜೀವವಾದ ಪ್ರಕೃತಿ ಆತ್ಮನನ್ನು ಆಕರ್ಷಿಸಬಲ್ಲದೆಂದು ನೀವು ಯೋಚಿಸುತ್ತೀರಾ? ಎಂದಿಗೂ ಇಲ್ಲ. ಹಿಂದೂ ಇಲ್ಲ. ಮುಂದೂ ಇಲ್ಲ. ಒಬ್ಬ ಮನುಷ್ಯ ಸುಂದರವಾದ ಮುಖವೊಂದನ್ನು ಅನುಸರಿಸಿಕೊಂಡು ಹೋಗುವುದನ್ನು ನೋಡಿದರೆ, ಆ ಅಣುಗಳ ಒಂದು ವ್ಯವಸ್ಥೆಯನ್ನು ಅನುಸರಿಸಿಕೊಂಡು ಹೋಗುತ್ತಾನೆಂದು ನೀವು ಯೋಚಿಸುವಿರೇನು? ಎಂದಿಗೂ ಇಲ್ಲ. ಆ ಅಣುಗಳ ಹಿಂದೆ ದೈವೀಶಕ್ತಿಯ ಮತ್ತು ಪ್ರಭಾವದ ಪರಿಣಾಮ ಇದ್ದೇ ಇದೆ. ಅಜ್ಞಾನಿಯಾದವನಿಗೆ ಅದು ತಿಳಿಯುವದಿಲ್ಲ. ಆದರೂ ಪ್ರತ್ಯಕ್ಷವಾ ಗಿಯೋ ಅಪ್ರತ್ಯಕ್ಷವಾಗಿಯೋ ಅವನನ್ನು ಆಕರ್ಷಿಸುವದು ಅದೆ. ಆದುದರಿಂದ ಅತ್ಯಂತ ನೀಚವಾದ ಆರ್ಕಷಣೆಯೂ ತನ್ನ ಶಕ್ತಿಯನ್ನು ದೇವರಿಂದಲೇ ಹೊಂದುತ್ತದೆ. ಗಂಡನನ್ನು ಯಾರೂ ಅವನು ಗಂಡನೆಂದು

---

* ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ
(ಬೃಹದಾರಣ್ಯಕ ೪-೩-೩೨)

ಪ್ರೀತಿಸುವುದಿಲ್ಲ.* ಅವನಲ್ಲಿರುವ ಆತ್ಮಕ್ಕಾಗಿ ಅವನನ್ನು ಪ್ರೀತಿಸುತ್ತಾರೆ. ಪ್ರೀತಿಸುವ ಹೆಂಡತಿಯರಿಗೆ ಇದು ತಿಳಿದಿರಬಹುದು. ಅಥವಾ ತಿಳಿಯದಿರಬಹುದು. ಆದರೆ ಇದು ಸತ್ಯ. "ಪ್ರಿಯೇ ಹೆಂಡತಿಯನ್ನು ಹೆಂಡತಿಯೆಂದು ಯಾರೂ ಪ್ರೀತಿಸುವದಿಲ್ಲ. ಅವಳನ್ನು ಪ್ರೀತಿಸುವುದು ಅವಳಲ್ಲಿರುವ ಆತ್ಮಕ್ಕಾಗಿ." ಹಾಗೆಯೇ ಪ್ರಪಂಚದಲ್ಲಿ ಒಂದು ಮಗುವನ್ನೇ ಆಗಲಿ ಅಥವ ಮತ್ತಾರನ್ನೇ ಆಗಲಿ ಪ್ರೀತಿಸುವುದು ಅವರಲ್ಲಿರುವ ಆತ್ಮಕ್ಕಾಗಿಯೇ ಹೊರತು ಬೇರೆ ಅಲ್ಲ. ದೇವರು ದೊಡ್ಡ ಸೂಜಿಗಲ್ಲಿನ ಹಾಗೆ, ನಾವು ಕಬ್ಬಿಣದ ರೇಕುಗಳು. ಅವನು ನಮ್ಮೆಲ್ಲರನ್ನೂ ಆಕರ್ಷಿಸುತ್ತಾನೆ. ನಾವೆಲ್ಲಾ ಒದ್ದಾಡುವುದು ಅವನನ್ನು ಹೊಂದುವುದಕ್ಕಾಗಿಯೆ. ಪ್ರಪಂಚದಲ್ಲಿ ನಾವು ಇಷ್ಟರ ಮಟ್ಟಿಗೆ ತಾಪತ್ರಯ ಪಡುತ್ತಿರುವುದು ಬರಿಯ ಸ್ವಾರ್ಥಕ್ಕೋಸ್ಕರವೇ ಅಲ್ಲ. ಅವಿವೇಕಿಗಳಿಗೆ ತಾವು ಮಾಡುತ್ತಿರುವುದೇನೆಂಬುದು ಗೊತ್ತಾಗುವುದಿಲ್ಲ. ಆದರೂ ಆ ಸೂಜಿಗಲ್ಲನ್ನು ಮುಟ್ಟುವುದಕ್ಕೇ ಅವರು ತಮ್ಮ ಜೀವನವನ್ನೆಲ್ಲಾ ದುಡಿಯುತ್ತಾರೆ. ಜೀವನ ಸಂಗ್ರಾಮದಲ್ಲಿ ನಾವು ತೊಳಲಾಡುವುದೂ ಸಾಹಸಪಡುವುದೂ ಎಲ್ಲವೂ ಅವನನ್ನು ಸೇರಿ ಅವನೊಂದಿಗೆ ಒಂದಾಗುವುದಕ್ಕಾಗಿಯೇ ಆಗಿದೆ.

ಜೀವನದಲ್ಲಿ ಒದಗುವ ಹೋರಾಟಗಳೂ ಅವುಗಳ ಉದ್ದಿಶ್ಯಗಳೂ ಭಕ್ತಿಯೋಗಿಗೆ ಮಾತ್ರ ತಿಳಿದಿರುತ್ತವೆ. ಅವನು ಅಂತಹ ಅನೇಕ ಹೋರಾಟಗಳನ್ನು ದಾಟಿ ಬಂದಿರುವುದರಿಂದ ಅವುಗಳ ಅರ್ಥವು ಅವನಿಗೆ ತಿಳಿದಿರುತ್ತದೆ. ಆಗ ಅವುಗಳ ಹಿಡಿತದಿಂದ ಬಿಡುಗಡೆಯಾಗಬೇಕೆಂದು ಅವನು ಬಹಳ ಶ್ರದ್ಧೆಯಿಂದ ಆಶಿಸುತ್ತಾನೆ. ಆ ಹೋರಾಟಗಳಿಂದ ತಪ್ಪಿಸಿಕೊಂಡು ಅವನು ಬೇರೊಂದು ಸೂಜಿಗಲ್ಲಿನ ಕಡೆಗೆ–ಮಹಾತ್ಮನಾದ ಹರಿಯ ಕಡೆಗೆ--ಹೋಗಲು ಆಶಿಸುತ್ತಾನೆ. ದೇವರೆಂಬ ಮಹತ್ತಾದ

* ನವಾರೆ ಪತ್ಯುಃ ಕಾಮಾಯ ಪತಿಃ ಪ್ರಿಯೋಭವತ್ಯಾತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ (ಬೃಹದಾರಣ್ಯಕ ೨-೪-೫)

ನವಾರೆ ಜಾಯಾಯೈ ಕಾಮಾಯ ಜಾಯಾ ಪ್ರಿಯಾ ಭವತ್ಯಾತ್ಮನಸ್ತು ಕಾಮಾಯ ಜಾಯಾ ಪ್ರಿಯಾಭವತಿ ೨-೪-೫

ಆಕರ್ಷಣೆಯ ಎದುರಿಗೆ ಉಳಿದ ಎಲ್ಲಾ ಆಕರ್ಷಣೆಗಳೂ ಮಾಯವಾಗು ತ್ತವೆ. ಅವನ ಹೃದಯವನ್ನು ಪೂರ್ಣವಾಗಿ ಆಕ್ರಮಿಸಿರುವ ಭಗವಂತ ನನ್ನು ಕುರಿತ ಪ್ರೇಮವು ಮತ್ತಾವ ಪ್ರೇಮಕ್ಕೂ ಸ್ಥಳವನ್ನು ಕೊಡುವು ದಿಲ್ಲ. ಹಾಗಾಗದಿರಲು ಹೇಗೆ ತಾನೆ ಸಾಧ್ಯ? ಭಗವಂತನೆಂಬ ಸಾಗರದ ಜಲಪ್ರವಾಹವು ಭಕ್ತಿಯಿಂದ ಅವನ ಹೃದಯವನ್ನು ತುಂಬುತ್ತದೆ. ಆಗ ಅಲ್ಲಿ ಮತ್ತಾವ ಚಿಕ್ಕ ಪ್ರೇಮಗಳಿಗೂ ಸ್ಥಳವಿರುವುದಿಲ್ಲ. ಇದೇ ಭಕ್ತಿಯ ವೈರಾಗ್ಯ ಅಥವ ತ್ಯಾಗವೆಂಬುದು. ಅಂದರೆ ಭಗವಂತನಲ್ಲದ ಎಲ್ಲಾ ವಸ್ತು ಗಳಲ್ಲೂ ವೈರಾಗ್ಯವನ್ನು ಹೊಂದುವುದು ಭಗವಂತನಲ್ಲಿ ಮಾತ್ರ ಇಟ್ಟಿ ರುವ ಅನುರಾಗದ ಫಲವೆಂದು ಅರ್ಥ.

ಪೂರ್ಣಭಕ್ತಿಯ ಸಾಧನೆಗೆ ನಿಜವಾಗಿಯೂ ಅದೇ ಕೊನೆಯ ಸಿದ್ಧತೆ. ಅಂತಹ ವೈರಾಗ್ಯದ ಕಾಲವು ಬಂದ ಕೂಡಲೆ ಪರಾಭಕ್ತಿಗೆ ದಾರಿಯನ್ನು ತೋರಿಸುವ ಬಾಗಿಲುಗಳು ತೆರೆಯುತ್ತವೆ. ಮತ್ತು ಆತ್ಮವು ಅದರ ಮೂಲಕ ದಾಟಿ ಹೋಗುತ್ತದೆ. ಆಗಲೇ ನಮಗೆ ನಿಜ ವಾದ ಭಕ್ತಿ ಎಂಬುದು ಗೊತ್ತಾಗುವುದು. ಪರಾಭಕ್ತಿಯ ಈ ಸನ್ನಿಧಿ ಯನ್ನು ಸೇರಿದ ಭಕ್ತನಿಗೆ ಮಾತ್ರ ಆತ್ಮಜ್ಞಾನಕ್ಕೆ ಬಾಹ್ಯ ಸಹಾಯಗಳೂ ವಿಗ್ರಹಗಳೂ ಆಚಾರ ಆಚರಣೆಗಳೂ ಅನವಶ್ಯಕವೆಂದು ಹೇಳುವ ಹಕ್ಕಿದೆ. ಯಾವ ಮಟ್ಟದಲ್ಲಿ ಸಮಸ್ತ ಜಗತ್ತೂ ಅಣ್ಣತಮ್ಮಂದಿರೆಂದು ತಿಳಿಯಲು ಸಾಧ್ಯವೋ ಆ ಮಟ್ಟವನ್ನು ಅವನು ಮಾತ್ರ ಏರಿದ್ದಾನೆಂದು ಹೇಳ ಬೇಕು. ಉಳಿದವರು ಸುಮ್ಮನೆ ಮಾತನಾಡುತ್ತಾರೆ. ಯಾಕೆಂದರೆ ಅಂತಹ ಭಕ್ತನಿಗೆ ಮಾತ್ರವೇ ವ್ಯತ್ಯಾಸಗಳು ಕಾಣುವುದಿಲ್ಲ. ಪ್ರೇಮದ ಮಹಾ ಸಮುದ್ರವು ಅವನಲ್ಲಿ ಸೇರುತ್ತದೆ. ಆಗ ಇತರರಂತೆ ಅವನು ಮನುಷ್ಯರು, ಪ್ರಾಣಿಗಳು, ಸೂರ್ಯ, ಚಂದ್ರ ಮತ್ತು ನಕ್ಷತ್ರಗಳನ್ನು ನಿತ್ಯವೂ ನೋಡುವುದಿಲ್ಲ. ಅವುಗಳನ್ನೆಲ್ಲಾ ತನ್ನ ಪ್ರಿಯನಾದ ಭಗವಂತನನ್ನೇ ನೋಡುತ್ತಾನೆ. ಆಗ ಅವನಿಗೆ ಎಲ್ಲಾ ಮುಖಗಳಲ್ಲೂ ತನ್ನ ಹರಿಯೇ ಪ್ರಕಾಶಿಸುವುದು ಕಾಣುತ್ತದೆ. ಸೂರ್ಯಚಂದ್ರರ ಕಾಂತಿಗಳು ಅವನ ಪ್ರಕಾಶಗಳಾಗಿ ತೋರುತ್ತವೆ. ಎಲ್ಲಿ ಸೌಂದರ್ಯ ಗಾಂಭೀರ್ಯ

ಗಳಿವೆಯೊ ಅವೆಲ್ಲಾ ಭಗವಂತನ ರೂಪಗಳೇ ಎಂದು ಅವನಿಗೆ ಅನುಭವ ವಾಗುತ್ತದೆ. ಅಂತಹ ಭಕ್ತರು ಇನ್ನೂ ಬದುಕಿದ್ದಾರೆ. ಅಂತಹವರಿಲ್ಲದ ಕಾಲ ಜಗತ್ತಿನಲ್ಲಿ ಎಂದಿಗೂ ಇಲ್ಲ. ಅವರು ಹಾವು ಬಂದು ತಮ್ಮನ್ನು ಕಡಿದರೂ ತಮ್ಮ ಪ್ರಿಯನಿಂದ ಕರೆ ಬಂದಿತೆಂದು ಹೇಳಿಕೊಳ್ಳುತ್ತಾರೆ. ಅಂತಹವರಿಗೆ ಮಾತ್ರ ವಿಶ್ವಭ್ರಾತೃತ್ವವನ್ನು ಕುರಿತು ಮಾತನಾಡಲು ಅಧಿ ಕಾರವಿದೆ. ಯಾಕೆಂದರೆ ಅವರಿಗೆ ಸ್ವಲ್ಪವೂ ಕಾಮ ಕ್ರೋಧಗಳಿರುವುದಿಲ್ಲ. ಇತರರ ವಿಷಯದಲ್ಲಿ ಅವರ ಮನಸ್ಸು ಎಂದಿಗೂ ದ್ವೇಷಾಸೂಯೆಗಳಿಗೆ ಒಳಗಾಗುವುದಿಲ್ಲ. ಆಗ ಬಾಹ್ಯ ಮತ್ತು ಇಂದ್ರಿಯ ವಶವಾದ ಜಗತ್ತು ಅವರ ಕಣ್ಣುಗಳಿಂದ ಎಂದೆಂದಿಗೂ ಮರೆಯಾಗುತ್ತದೆ. ಪ್ರೇಮದ ಮೂಲಕ, ಷರದೆಯ ಹಿಂದೆ ಇರುವ ಸತ್ಯವು ಯಾವಾಗಲೂ ಅವರ ಕಣ್ಣಿಗೆ ಕಾಣುತ್ತಿರುವಾಗ ಅವರಿಗೆ ಹೇಗೆ ತಾನೆ ಕೋಪವುಂಟಾಗಬಲ್ಲದು?

## ೧೩ ಭಕ್ತಿಯ ಸ್ವಾಭಾವಿಕತೆ ಮತ್ತು ಅದರ ಮುಖ್ಯ ರಹಸ್ಯ

ಅರ್ಜುನನು ಶ್ರೀಕೃಷ್ಣನನ್ನು ಈ ರೀತಿಯಾಗಿ ಕೇಳುತ್ತಾನೆ: "ಯಾವ ಭಕ್ತರು ಯಾವಾಗಲೂ ನಿನ್ನ ಧ್ಯಾನದಲ್ಲೇ ತೊಡಗಿ ನಿನ್ನಲ್ಲಿ ಭಕ್ತಿಯನ್ನು ಮಾಡುತ್ತಾರೋ ಮತ್ತು ಯಾರು ಕಣ್ಣಿಗೆ ಕಾಣದ ನಿನ್ನ ಅವ್ಯಕ್ತ ನಿಸರ್ಗ ರೂಪವನ್ನು ಧ್ಯಾನಿಸುತ್ತಾರೋ ಇವರಿಬ್ಬರಲ್ಲಿ ಯಾರು ಹೆಚ್ಚಾದ ಯೋಗಿಗಳು?'' ಅದಕ್ಕೆ ಶ್ರೀಕೃಷ್ಣನು ಈ ರೀತಿಯಾಗಿ ಉತ್ತರವಿತ್ತನು: "ಯಾರು ಯಾವಾಗಲೂ ನನ್ನಲ್ಲೇ ಮನಸ್ಸಿಟ್ಟು ನನ್ನನ್ನು ಶ್ರದ್ಧೆಯಿಂದ ಉಪಾಸನೆ ಮಾಡುತ್ತಾರೋ ಅವರೇ ನನ್ನ ಅಭಿಪ್ರಾಯ ದಲ್ಲಿ ಹೆಚ್ಚಿನ ಯೋಗಿಗಳು. ಯಾರು ಅವ್ಯಕ್ತವೂ ಅನಿರ್ದೇಶ್ಯವೂ ಊಹೆಗೆ ಮೀರಿದುದೂ ಶಾಶ್ವತವೂ ಆದ ನನ್ನನ್ನು, ಇಂದ್ರಿಯಗಳನ್ನೆಲ್ಲಾ ಜಗಿ ಹಿಡಿದು, ಎಲ್ಲರಲ್ಲೂ ಸಮಭಾವನನ್ನಿಟ್ಟು ಸಮಸ್ತ ಪ್ರಾಣಿಗಳ ಹಿತದಲ್ಲೂ ಆಸಕ್ತರಾಗಿ ಪೂಜಿಸುತ್ತಾರೋ ಅವರೂ ನನ್ನನ್ನೆ ಹೊಂದುತ್ತಾರೆ.

ನಿರ್ಗುಣದಲ್ಲಿ ಮನಸ್ಸಿಟ್ಟವರಿಗೆ ಕ್ಲೇಶವು ಅಧಿಕ. ದೇಹಧಾರಿಗಳಿಗೆ ಇಂದ್ರಿಯಗಳಿಗೆ ಕಾಣದ ಸ್ವರೂಪವು ದೊರೆಯುವುದು ಬಹಳ ಕಷ್ಟವಾಗುತ್ತದೆ. ಆದರೆ ಯಾರು ಎಲ್ಲಾ ಕರ್ಮಗಳನ್ನೂ ನನಗೆ ಒಪ್ಪಿಸಿ ನನ್ನನ್ನೇ ನಂಬಿ, ಮತ್ತಾವುದರಲ್ಲೂ ಅನಾಸಕ್ತರಾಗಿ ಇರುತ್ತಾರೋ ಅವರನ್ನು ನಾನು ಸಂಸಾರಸಾಗರದಿಂದ ಪಾರುಮಾಡುತ್ತೇನೆ.

ಮೇಲೆ ಹೇಳಿದ ವಾಕ್ಯಗಳಲ್ಲಿ ಜ್ಞಾನಯೋಗ ಮತ್ತು ಭಕ್ತಿಯೋಗ ಎರಡರ ಪ್ರಸ್ತಾಪವೂ ಇದೆ. ಎರಡರ ನಿಯಮಗಳೂ ಅವುಗಳಲ್ಲಿ ಸ್ಪಷ್ಟವಾಗಿದೆಯೆಂದು ಹೇಳಬಹುದು. ಜ್ಞಾನಯೋಗವು ಮಹತ್ತರವಾದುದು. ನಿರ್ಗುಣ ಬ್ರಹ್ಮವನ್ನು ಸಾಕ್ಷಾತ್ಕರಿಸಲು ಅದೇ ದಾರಿಯು. ಪ್ರತಿಯೊಬ್ಬ ವ್ಯಕ್ತಿಯೂ ವೇದಾಂತದಿಂದ ತನಗೆ ಬೇಕಾದುದನ್ನು ಸಾಧಿಸಬಹುದೆಂದು ನಂಬುವುದು ಆಶ್ಚರ್ಯಕರವಾದುದು. ಆದರೆ ವೇದಾಂತಕ್ಕೆ ಅನುಸಾರವಾಗಿ ಜೀವಿಸುವುದು ಬಹಳ ಕಷ್ಟ. ನಮ್ಮ ಜೀವವನ್ನು ವೇದಾಂತಕ್ಕೆ ಅನುಸಾರವಾದ ದಾರಿಯಲ್ಲಿ ತೆಗೆದುಕೊಂಡು ಹೋಗುವ ಪ್ರಯತ್ನದಲ್ಲಿ ನಾವು ಅನೇಕ ಅಪಾಯಗಳಿಗೆ ಗುರಿಯಾಗುತ್ತೇವೆ. ಪ್ರಪಂಚವನ್ನು ಎರಡು ಬಗೆಯ ಜನರಾಗಿ ವಿಭಾಗಿಸಬಹುದು. ದೇಹವೇ ಜೀವನದ ತಿರುಳು ಮತ್ತು ಗುರಿ ಎನ್ನುವವರು ಒಂದು ಗುಂಪು. ದೇಹವು ಆತ್ಮದ ಸಂಸ್ಕಾರಕ್ಕೆ ಬರಿಯ ಒಂದು ಉಪಕರಣ ಮಾತ್ರ ಎನ್ನುವವರು ಮತ್ತೊಂದು ಗುಂಪು. ಪಿಶಾಚಿಯೂ ತನ್ನ ಉಪಯೋಗಕ್ಕಾಗಿ ವೇದವನ್ನು ಉದಾಹರಣೆಯಾಗಿ ಕೊಡಬಲ್ಲದೆಂದು ಗಾದೆಯಿದೆ. ಹಾಗೇ ಜ್ಞಾನ ಮತ್ತು ವೇದಾಂತದ ದಾರಿಯು, ಒಳ್ಳೆಯ ಮನುಷ್ಯನಿಗೆ ಉಚ್ಚವಾದ ಧ್ಯೇಯಸಾಧನೆಗೆ ಹೇಗೆ ಹೇಗೆ ಸಾಧಕವಾಗುವುವೋ ಹಾಗೆಯೇ ಕೆಟ್ಟ ಮನುಷ್ಯನಿಗೆ ಅವನ ಉದ್ದೇಶಕ್ಕೂ ಸಹಾಯಕವಾಗುತ್ತವೆ. ಇದು ಜ್ಞಾನಯೋಗದಲ್ಲಿರುವ ಅಪಾಯ. ಆದರೆ ಭಕ್ತಿಯೋಗವು ಸ್ವಾಭಾವಿಕವೂ ಮೃದುವೂ ಇಂಪೂ ಆದುದು. ಭಕ್ತನು ಜ್ಞಾನಯೋಗಿಯಂತೆ ಅತಿ ಎತ್ತರಕ್ಕೆ ಹಾರುವುದಿಲ್ಲ. ಅದೇ ಕಾರಣದಿಂದ ಅವನು ಅತಿ ಹಳ್ಳಕ್ಕೂ ಬೀಳುವುದಿಲ್ಲ. ಆದರೆ ಆತ್ಮದ ಬಂಧನಗಳು ಪೂರ್ಣವಾಗಿ ಕಳಚಿ

ಹೋಗುವ ವರೆಗೆ ಮನುಷ್ಯನಿಗೆ ಮುಕ್ತಿಯಿಲ್ಲದುದರಿಂದ, ಭಕ್ತನಿಗೆ ಆವನು ಆರಿಸಿಕೊಂಡ ಈ ಮೃದುವಾದ ಮತ್ತು ಸುಲಭವಾದ ದಾರಿಯಿಂದ ಮುಕ್ತಿಯು ಹೇಗೆ ದೊರೆಯುವುದೆಂಬ ಪ್ರಶ್ನೆಯು ಏಳುತ್ತದೆ.

ಭಕ್ತಳಾದ ಗೋಪಿಯ ಪಾಪಪುಣ್ಯಗಳ ಬಂಧನವು ಭಕ್ತಿಯಿಂದ ಹೇಗೆ ಕಳಚಿಹೋಯಿತೆಂಬುದನ್ನು ತೋರಿಸಲು ಇಲ್ಲಿ ಒಂದು ಉದಾಹರಣೆಯಿದೆ. "ಭಗವಂತನನ್ನು ಕುರಿತು ಗೋಪಿಯು ಮಾಡುತ್ತಿದ್ದ ಚಿಂತೆಯು ಅವಳ ಪುಣ್ಯವನ್ನು ಹೋಗಲಾಡಿಸಿತು. * ಭಗವಂತನು ದೊರೆಯದುದರಿಂದ ಅವಳಿಗೆ ಉಂಟಾದ ಕ್ಲೇಶವು ಅವಳ ಪಾಪಗಳನ್ನೆಲ್ಲ ನಾಶಮಾಡಿತು. ಈ ರೀತಿ ಎಲ್ಲಾ ಬಂಧನಗಳಿಂದಲೂ ನಿವೃತ್ತಳಾಗಿ ಅವಳು ಮುಕ್ತಳಾದಳು." ಆದುದರಿಂದ ಭಕ್ತಿಯ ತಿರುಳು ಯಾವುದೆಂದರೆ ಮನುಷ್ಯನ ಹೃದಯದ ಭಾವನೆಗಳು ತಪ್ಪಲ್ಲವೆಂದು ತಿಳಿಯುವುದು. ಅವುಗಳನ್ನು ಸರಿಯಾದ ದಾರಿಯಲ್ಲಿ ತಿರುಗಿಸಿ, ಅವು ಪೂರ್ಣವಾಗಿ ಪರಿಶುದ್ಧವಾಗುವ ವರೆಗೆ ಹಿಡಿತದಲ್ಲಿಟ್ಟುಕೊಂಡಿರಬೇಕಾದುದು ಆವಶ್ಯಕ. ಅವಕ್ಕೆ ಕೊಡಬೇಕಾದ ಅತ್ಯಂತ ಉತ್ತಮವಾದ ದಾರಿಯೆಂದರೆ ನಮ್ಮನ್ನು ದೇವರಲ್ಲಿಗೆ ಕರೆದುಕೊಂಡು ಹೋಗುವ ದಾರಿಯೆ. ಉಳಿದ ದಾರಿಗಳೆಲ್ಲಾ ನೀಚವಾದುವು. ನಮ್ಮ ಎಲ್ಲಾ ಭಾವನೆಗಳನ್ನೂ ಸುಖವಾದುದು ಮತ್ತು ದುಃಖಕರವಾದುದು ಎಂದು ವಿಂಗಡಿಸಬಹುದಾದುದರಿಂದ, ನಮಗೆ ದುಃಖಕರವಾದ ಭಾವನೆಗಳಿಗೆ ಹೇಗೆ ಅತ್ಯುಚ್ಚವಾದ ದಾರಿಯನ್ನು ತೋರಿಸಬಹುದೆಂಬುದು ಆಶ್ಚರ್ಯಕರವಾಗಬಹುದು. ಹಾಗೆ ಮಾಡಬಹುದೆಂದೂ, ದುಃಖದಿಂದಲೂ ಪ್ರಯೋಜನವುಂಟೆಂದೂ ಭಕ್ತಿಯೋಗವು ನಮಗೆ ಬೋಧಿಸುತ್ತದೆ. ಉದಾಹರಣೆಗಾಗಿ ಒಬ್ಬ ಮನುಷ್ಯನಿಗೆ, ತನಗೆ ಧನವಾಗಲಿ ಮತ್ತಾವುದಾದರೂ ಪ್ರಾಪಂಚಿಕ

---

* ತಚ್ಚಿಂತಾ ವಿಪುಲಾಹ್ಲಾದ ಕ್ಷೀಣಪುಣ್ಯಚಯಾ ತಥಾ ।
ತದಪ್ರಾಪ್ತಿ ಮಹಾದುಃಖ ವಿಲೀನಾ ಶೇಷಪಾತಕ ॥
ಚಿಂತಯಂತೀ ಜಗತ್ಸೂತಿಂ ಪರಬ್ರಹ್ಮಸ್ವರೂಪಿಣಂ ।
ನಿರುಚ್ಛ್ವಾಸತಯಾ ಮುಕ್ತಿಂಗತಾನ್ಯಾ ಗೋಪಕನ್ಯಕಾ ॥
(ವಿಷ್ಣು ಪುರಾಣ ೫–೧೩–೨೧–೨೨)

ಸುಖವಾಗಿ ಇಲ್ಲವೆಂದು ದುಃಖವುಂಟಾಗುವುದೆಂದು ಇಟ್ಟುಕೊಳ್ಳೋಣ. ಆಗ ಅವನ ಭಾವನೆಗಳಿಗೆ ತಪ್ಪು ದಾರಿಯನ್ನು ತೋರಿಸಿದಂತೆ ಆಯಿತು. ಆದರೆ ದೇವರು ತನಗೆ ದೊರೆಯಲಿಲ್ಲವೆಂದಾಗಲಿ, ಅಥವಾ ಜೀವನದ ಉದಾತ್ತವಾದ ಧ್ಯೇಯಗಳು ತನಗೆ ಸಾಧಿಸಲಿಲ್ಲವೆಂದಾಗಲಿ ಅವನಿಗೆ ನೋವುಂಟಾದರೆ ಆ ನೋವೇ ಅವನ ಮೋಕ್ಷಕ್ಕೆ ದಾರಿಯಾಗುವುದು. ಹಾಗೆಯೇ ನಿಮ್ಮಲ್ಲಿ ಒಂದು ಹಿಡಿ ಹಣವಿರುವಾಗ ಅದಕ್ಕಾಗಿ ನಿಮಗೆ ಆನಂದವುಂಟಾದರೆ ನೀವು ಆನಂದದ ಪ್ರವೃತ್ತಿಯನ್ನು ಕೆಟ್ಟದಾರಿಯಲ್ಲಿ ಬಿಟ್ಟಂತೆ ಆಗುವುದು. ಅದಕ್ಕೆ ಉತ್ತಮವಾದ ಮಾರ್ಗವನ್ನು ತೋರಿಸಿ ಉಚ್ಚವಾದ ಧ್ಯೇಯಗಳ ಸಾಧನೆಯಾಗುವಂತೆ ಮಾಡಬೇಕು. ಯಾಕೆಂದರೆ ಅಂತಹ ಧ್ಯೇಯದಿಂದಲೇ ನಾವು ನಿಜವಾದ ಆನಂದವನ್ನು ಹೊಂದಬೇಕು. ನಮ್ಮ ಇತರ ಪ್ರವೃತ್ತಿಗಳ ವಿಷಯದಲ್ಲೂ ಹೀಗೇ ಹೇಳಬಹುದು. ಆ ಪ್ರವೃತ್ತಿಗಳು ಒಂದೂ ತಪ್ಪಲ್ಲವೆಂದು ಭಕ್ತನು ಹೇಳುತ್ತಾನೆ. ಅವುಗಳ ನ್ನೆಲ್ಲಾ ತನ್ನ ಕೈಯಲ್ಲಿ ಇಟ್ಟುಕೊಂಡು ಅವನು ಅವುಗಳನ್ನು ತಪ್ಪದೆ ದೇವರ ಕಡೆಗೆ ತಿರುಗಿಸುತ್ತಾನೆ.

## ೧೪ ಭಕ್ತಿಯು ಪ್ರಕಟವಾಗುವ ರೀತಿಗಳು

ಭಕ್ತಿಯು ಪ್ರಕಟವಾಗುವ ಬಗೆಬಗೆಯ ರೂಪಗಳಲ್ಲಿ ಇವು ಕೆಲವು. ಮೊದಲನೆಯದು ಗೌರವ. ಜನರು ದೇವಾಲಯಗಳಲ್ಲೂ ಪವಿತ್ರವಾದ ಸ್ಥಳಗಳಲ್ಲೂ ಯಾಕೆ ಭಕ್ತಿಯನ್ನು ತೋರಿಸುತ್ತಾರೆ? ಯಾಕೆಂದರೆ ಭಗವಂತನ ಆರಾಧನೆಯು ಅಲ್ಲಿ ನಡೆಯುತ್ತದೆ. ಆ ಸ್ಥಳಗಳೊಂದಿಗೆ ಭಗವಂತನ ಸಂಬಂಧವುಂಟಾಗಿರುತ್ತದೆ. ಎಲ್ಲಾ ದೇಶಗಳಲ್ಲೂ ಜನರು ಧರ್ಮಬೋಧಕರಿಗೆ ಯಾಕೆ ಗೌರವವನ್ನು ತೋರಿಸುತ್ತಾರೆ? ಮನುಷ್ಯನ ಹೃದಯಕ್ಕೆ ಹಾಗೆ ಮಾಡುವುದು ಸ್ವಾಭಾವಿಕವಾದುದು. ಯಾಕೆಂದರೆ ಅಂತಹ ಗುರುಗಳೆಲ್ಲಾ ದೇವರನ್ನು ಕುರಿತು ಬೋಧಿಸುತ್ತಾರೆ. ಆದುದರಿಂದ ಗೌರವವು ಪ್ರೀತಿಯಿಂದ ಬೆಳೆದುದು. ಯಾರಲ್ಲಿ ನಮಗೆ ಪ್ರೀತಿಯಿಲ್ಲವೋ ಅಂತಹವರನ್ನು ನಾವು ಎಂದಿಗೂ ಗೌರವಿಸಲಾರೆವು.

ಮುಂಡಲದು ಪ್ರೀತಿ ಅಥವ ದೇವರಲ್ಲಿ ಆನಂದ. ಜನರಿಗೆ ಇಂದ್ರಿಯಗಳ ಆನಂದದಲ್ಲಿ ಎಂತಹ ಸುಖವುಂಟಾಗುತ್ತದೆ! ತಮ್ಮ ಇಂದ್ರಿಯಗಳಿಗೆ ಬೇಕಾದ ಸುಖಗಳನ್ನು ಸಂಪಾದಿಸಲು ಅವರು ಎಲ್ಲಿಗೆ ಬೇಕಾದರೂ ಹೋಗಿ ಎಂತಹ ಅಪಾಯಗಳನ್ನಾದರೂ ಎದುರುಗೊಳ್ಳುತ್ತಾರೆ. ಭಕ್ತನಲ್ಲಿರಬೇಕಾದುದು ದೇವರ ವಿಷಯದಲ್ಲಿ ಈ ಬಗೆಯ ಗಾಢವಾದ ಪ್ರೇಮ.

ಅನಂತರ ನೋವುಗಳಲ್ಲೆಲ್ಲಾ ಅತ್ಯಂತ ಹಿತವಾದ ನೋವಾದ ವಿರಹವೆಂಬುದು ಬರುತ್ತದೆ. ಪ್ರಿಯನು ಇಲ್ಲದುದರಿಂದ ಉಂಟಾಗುವ ನೋವೇ ವಿರಹ. ಪ್ರಪಂಚದಲ್ಲಿ ದೊರಕಿಸಿಕೊಳ್ಳಲು ಅರ್ಹವಾದ ಒಂದೇ ವಸ್ತುವಾದ ದೇವರು ತನಗೆ ದೊರಕದುದರಿಂದ ಭಕ್ತನಿಗೆ ಅಸಂತುಷ್ಟಿಯೂ ಸ್ವಲ್ಪ ಹೆಚ್ಚು ಕಡಿಮೆ ಹುಚ್ಚೂ ಉಂಟಾಗುತ್ತದೆ. ಅಂತಹ ಸಮಯಗಳಲ್ಲಿ ಮನಸ್ಸಿಗೆ ಭಗವಂತನನ್ನು ಹೊರತು ಉಳಿದ ಪದಾರ್ಥಗಳಲ್ಲಿ ಅಸಂತುಷ್ಟಿಯುಂಟಾಗುತ್ತದೆ. * ಮನಸ್ಸಿಗೆ ಇಂತಹ ಸ್ಥಿತಿಯು ಪ್ರಾಪಂಚಿಕ ಪ್ರೇಮದ ವಿಷಯದಲ್ಲೂ ಕೆಲವು ವೇಳೆ ಉಂಟಾಗುತ್ತದೆ· ಯಾಕೆಂದರೆ ಒಬ್ಬ ಮನುಷ್ಯನು ಒಬ್ಬ ಸ್ತ್ರೀಯಲ್ಲೂ ಅಥವ ಒಬ್ಬ ಸ್ತ್ರೀಯು ಒಬ್ಬ ಪುರುಷನಲ್ಲೂ ಅತ್ಯಂತ ನಿಕಟವಾದ ಪ್ರೇಮವನ್ನಿಟ್ಟಿದ್ದರೆ ಆಗ ತಮ್ಮ ಪ್ರಿಯರನ್ನು ಹೊರತು ತಮಗೆ ಪ್ರೇಮವಿಲ್ಲದ ಉಳಿದವರನ್ನು ನೋಡಿದರೆ ಅವರಿಗೆ ಬೇಸರಿಕೆಯಾಗುವುದು ನಮಗೆ ಕಣ್ಣಿಗೆ ಕಾಣುತ್ತದೆ. ಪರಾಭಕ್ತಿಯು ಮನಸ್ಸನ್ನು ಪೂರ್ಣವಾಗಿ ಆವರಿಸಿದಾಗ ನಮಗೆ ಪ್ರೇಮವಿಲ್ಲದ ವಸ್ತುಗಳ ವಿಷಯದಲ್ಲಿ ಅದೇ ಭಾವವು ಉಂಟಾಗುತ್ತದೆ. ಆ ಕಾಲದಲ್ಲಿ ದೇವರನ್ನು ಹೊರತು ಉಳಿದ ವಿಚಾರಗಳನ್ನು ಮಾತನಾಡುವುದು ಸಹ ನಮಗೆ ಅಸಹ್ಯವಾಗುತ್ತದೆ. ಮುಂಡಕ ಉಪನಿಷತ್ತಿನಲ್ಲಿ ''ಅವನನ್ನೇ ಧ್ಯಾನಿಸು, ಅವನನ್ನು ಮಾತ್ರವೇ ಧ್ಯಾನಿಸು. ಉಳಿದ ವ್ಯರ್ಥವಾದ ಮಾತುಗಳನ್ನೆಲ್ಲ ತ್ಯಜಿಸು'' ‡ ಎಂಬುದಾಗಿ ಹೇಳಿದೆ. ಭಕ್ತನಿಗೆ ದೇವರನ್ನು

* ಏಕರತಿವಿಚಿಕಿತ್ಸಾ (ಮುಂಡಕ ೨–೨–೫)

‡ ತಮೇವೈಕಂ ಜಾನಥ ಆತ್ಮಾನಮನ್ಯಾವಾಚೋ
ವಿಮುಂಚಥಾ ಮೃತಸ್ಯೈಷಸೇತುಃ (ಮುಂಡಕ ೨–೨–೫)

ಕುರಿತು ಮಾತನಾಡುವವರು ಮಾತ್ರ ಸ್ನೇಹಿತರಾಗಿ ತೋರುತ್ತಾರೆ. ಉಳಿದ ವಿಷಯಗಳನ್ನು ಕುರಿತು ಮಾತನಾಡುವವರು ಸ್ನೇಹಿತರಾಗಿ ತೋರುವುದಿಲ್ಲ.

ಅನಂತರ ಇದಕ್ಕಿಂತಲೂ ಉನ್ನತವಾದ ಒಂದು ಮಟ್ಟವು ಸಿಗುತ್ತದೆ. ಆಗ ಜೀವವನ್ನು ಇಟ್ಟುಕೊಂಡಿರುವುದು ಪ್ರಿಯನಿಗಾಗಿಯೇ. ಇದನ್ನೇ ಭಕ್ತಿಯೋಗದಲ್ಲಿ 'ತದರ್ಥ ಪ್ರಾಣಸಂಸ್ಥಾನ' ಎಂದು ಹೇಳಿರುವುದು. ಈ ಸ್ಥಿತಿಯಲ್ಲಿ ಜೀವವು ಸುಂದರವೂ ಸಾರ್ಥಕವೂ ಆಗುವುದು ಪ್ರೇಮದಿಂದ ಮಾತ್ರ. ಭಗವಂತನಲ್ಲಿ ಇಟ್ಟಿರುವ ಪ್ರೇಮವು ಒಂದು ಗಳಿಗೆ ಮರೆಯಾದರೂ ಜೀವವು ದೇಹದಲ್ಲಿ ಉಳಿಯುವುದಿಲ್ಲ. ಒಟ್ಟಿನಲ್ಲಿ ಬದುಕು ಆಗ ಚೆನ್ನಾಗಿರುವುದೇ ಭಗವಂತನಲ್ಲಿಟ್ಟಿರುವ ಪ್ರೇಮದಿಂದ.

ತದೀಯತೆ (ದೇವರ 'ತ್ವ') ಯು ಭಕ್ತಿಯೋಗಕ್ಕೆ ಅನುಸಾರವಾಗಿ ಭಕ್ತನು ಪೂರ್ಣನಾದಾಗ ಉಂಟಾಗುತ್ತದೆ. ಭಕ್ತನು ಪವಿತ್ರನಾಗಿ ಭಗವಂತನನ್ನು ಹೊಂದಿದಾಗ, ಭಗವಂತನ ಚರಣಕಮಲಗಳನ್ನು ಸ್ಪರ್ಶಿಸಿವುದರಿಂದ ಅವನ ಸ್ವಭಾವವು ಪೂರ್ಣವಾಗಿ ಬದಲಾವಣೆಯಾಗಿ ಪರಿಶುದ್ಧವಾದಾಗ, ಮಾತ್ರ ಆ ಭಾವ ಬರುತ್ತದೆ. ಅಲ್ಲಿಗೆ ಜೀವನದ ಉದ್ದೇಶವು ಪರಿಪೂರ್ಣವಾಗುತ್ತದೆ. ಆಗ ಭಕ್ತನು ಭಗವಂತನನ್ನು ಪೂಜಿಸುವ ಹೆಮ್ಮೆಗಾಗಿಯೆ ಜೀವಿಸುತ್ತಾನೆ. ಯಾಕೆಂದರೆ ಅವನ ಆನಂದವೂ ಸೌಖ್ಯವೂ ಅದರಲ್ಲಿ ಮಾತ್ರ ಅಡಕವಾಗಿರುತ್ತದೆ. ಅವನು ಭಗವಂತನ ಪೂಜೆಯನ್ನು ಏನಾದರೂ ಬಿಡುವುದಿಲ್ಲ. ಅಂಥವರನ್ನು ಕುರಿತು ಭಾಗವತದಲ್ಲಿ ಹೀಗೆ ಹೇಳಿದೆ. "ಸಮಸ್ತವಾದ ಬಂಧನಗಳಿಂದಲೂ ಬಿಡಲ್ಪಟ್ಟ ಮುನಿಗಳೂ ಕೂಡ ಭಗವಂತನನ್ನು ಭಕ್ತಿಯಿಂದ ಪ್ರೀತಿಸಲು ಪ್ರಾರಂಭಿಸುತ್ತಾರೆ. ಹರಿಯ ಗುಣವು ಅಂತಹುದು" ಮೋಕ್ಷ ಮಾರ್ಗಾನುಯಾಯಿಗಳೂ, ಬ್ರಹ್ಮವಾದಿಗಳೂ ಯಾರನ್ನು ಪ್ರೀತಿಸುತ್ತಾರೋ ಅವನೇ ಹರಿಯು.* ಭಕ್ತಿಯಲ್ಲಿ ತದೀಯತೆಯು ಈ ಮಟ್ಟಕ್ಕೆ ಏರಿದಾಗ ಅದಕ್ಕೆ ಈ ಶಕ್ತಿ

* ಯಂ ಸರ್ವೇ ದೇವಾನಮಸ್ಯಂತಿ ಮುಮುಕ್ಷವೋ ಬ್ರಹ್ಮವಾದಿನಶ್ಚೇತಿ
(ನೃಸಿಂಹತಪನಿ ಉಪನಿಷತ್ ೫–೨–೧೬)

ಯುಂಟಾಗುತ್ತದೆ. ಭಕ್ತನು ತನ್ನನ್ನು ತಾನು ಮರೆತು ಪ್ರಪಂಚದಲ್ಲಿ ತನಗೆ ಸೇರಿದುದು ಯಾವುದೂ ಇಲ್ಲವೆಂದು ತಿಳಿದುಕೊಂಡಾಗ ಮಾತ್ರ ಈ ತದೀಯತೆಯ ಭಾವವು ಅವನಿಗೆ ಉಂಟಾಗುತ್ತದೆ. ಸಾಮಾನ್ಯವಾದ ಪ್ರಿಯನು ತನ್ನ ಪ್ರೇಯಸಿಗೆ ಸೇರಿದ ಎಲ್ಲಾ ವಸ್ತುಗಳೂ ಹೇಗೆ ಪವಿತ್ರವಾದುವೆಂದು ತಿಳಿದುಕೊಳ್ಳುತ್ತಾನೋ ಹಾಗೆಯೇ ಭಕ್ತನಿಗೆ ಜಗತ್ತಿನ ಎಲ್ಲಾ ವಸ್ತುಗಳೂ ತನ್ನ ಪ್ರಿಯನಾದ ಭಗವಂತನಿಗೆ ಸೇರಿದುದರಿಂದ ಪವಿತ್ರವಾಗುತ್ತವೆ. ಭಗವಂತನನ್ನು ಪ್ರೀತಿಸುವವನಿಗೆ ಪ್ರಪಂಚದ ಎಲ್ಲಾ ವಸ್ತುಗಳೂ ಪ್ರಿಯವಾಗುತ್ತವೆ. ಯಾಕೆಂದರೆ ಅವುಗಳೆಲ್ಲಾ ಭಗವಂತನ ವಸ್ತುಗಳು.

## ೧೫ ವಿಶ್ವಪ್ರೇಮ ಮತ್ತು ಅದರಿಂದ ತ್ಯಾಗ

ನಾವು ಸಮಷ್ಟಿಯನ್ನು ಪೂಜಿಸದೆ ವ್ಯಷ್ಟಿಯನ್ನು ಮಾತ್ರ ಪೂಜಿಸುವುದು ಹೇಗೆ ಸಾಧ್ಯ? ದೇವರು ಸಮಷ್ಟಿಪೂರ್ಣ. ನಮ್ಮ ಕಣ್ಣಿಗೆ ಕಾಣುವ ಜಗತ್ತೆ ವ್ಯಷ್ಟಿ. ಜಗತ್ತನ್ನು ಪ್ರೀತಿಸುವುದು ಸಮಷ್ಟಿಯನ್ನು ಪ್ರೀತಿಸುವುದರಿಂದ ಮಾತ್ರ ಸಾಧ್ಯ. ಯಾಕೆಂದರೆ ಜಗತ್ತಿನ ಲಕ್ಷಾಂತರ ಚೇತನಗಳು ಒಂದುಗೂಡುವ ಸ್ಥಾನವು ಅದೆಯೆ. ಹಿಂದುದೇಶದ ತತ್ವಜ್ಞಾನಿಗಳು ಚಿಲ್ಲರೆ ವಿಚಾರಗಳನ್ನು ಯೋಚಿಸುತ್ತ ಕೂರುವುದಿಲ್ಲ. ಅವರು ವ್ಯಷ್ಟಿಯ ಕಡೆ ಒಂದು ಸಲ ನೋಡಿ ಅವುಗಳನ್ನೆಲ್ಲಾ ಒಳಗೊಂಡ ಸಮಷ್ಟಿಯನ್ನು ಹುಡುಕಲು ಹೊರಡುತ್ತಾರೆ. ಸಮಷ್ಟಿಯನ್ನು ಹುಡುಕುವುದೇ ಹಿಂದೂ ತತ್ವಜ್ಞಾನ ಮತ್ತು ಧರ್ಮದ ಮುಖ್ಯ ಕೆಲಸವಾಗಿದೆ. ಜ್ಞಾನಿಯು ಸಮಸ್ತ ಜಗತ್ತಿನ ಐಕ್ಯವನ್ನೂ ಒಂದರಲ್ಲಿ ಹುಡುಕಲು ಹೊರಡುತ್ತಾನೆ. ಅದು ಅವನಿಗೆ ತಿಳಿದರೆ ಎಲ್ಲವೂ ತಿಳಿದಂತೆಯೆ. ಭಕ್ತನು ಆ ಸಮಷ್ಟಿಯ ನಿಸರ್ಗ ವ್ಯಕ್ತಿಯನ್ನು ಸಾಕ್ಷಾತ್ಕರಿಸಿಕೊಳ್ಳಲು ಯತ್ನಿಸುತ್ತಾನೆ. ಅದನ್ನು ಪ್ರೀತಿಸುವುದರಲ್ಲಿ ಅವನು ಪ್ರಪಂಚವನ್ನೇ ಪ್ರೀತಿಸುತ್ತಾನೆ. ಯೋಗಿಯು, ಆ ಒಂದು ಸಮಷ್ಟಿಯ ಶಕ್ತಿಯನ್ನು

ಕಂಡುಹಿಡಿದು ಅದನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳಲು ಪ್ರಯತ್ನಿಸುತ್ತಾನೆ. ಈ ರೀತಿಯಾಗಿ ಅನಾದಿಕಾಲದಿಂದಲೂ ಭಾರತೀಯರ ಮನಸ್ಸು ವಿಜ್ಞಾನ, ಮನಶ್ಶಾಸ್ತ್ರ, ವೇದಾಂತ ಮತ್ತು ಪ್ರೇಮದಲ್ಲಿ ಸಮಷ್ಟಿಯನ್ನು ಹುಡುಕುವುದರ ಕಡೆಗೇ ತಿರುಗಿಸಲ್ಪಟ್ಟಿದೆ.

ಒಬ್ಬನಾದ ಮೇಲೆ ಒಬ್ಬನನ್ನು ತನ್ನ ಪ್ರೇಮಕ್ಕೆ ವಿಷಯವನ್ನಾಗಿ ಮಾಡಿಕೊಂಡು ಪ್ರೀತಿಸುತ್ತಾ ಹೋಗುವುದರಿಂದ, ಅನಂತ ಕಾಲದ ವರೆಗೆ ಹಾಗೆ ಮಾಡಿದರೂ ಜಗತ್ತನ್ನು ಸಮಷ್ಟಿಯಲ್ಲಿ ಪ್ರೀತಿಸುವುದು ಸಾಧ್ಯವಿಲ್ಲವೆಂಬುದು ಭಕ್ತನಿಗೆ ದೃಢವಾಗಿ ಗೊತ್ತಾಗುತ್ತದೆ. ಆ ಕಾರಣ ದಿಂದ ಎಲ್ಲಾ ಪ್ರೇಮದ ಸಾರವೂ ದೇವರೆ ಎಂಬುದನ್ನೂ, ಜಗತ್ತಿನ ಸ್ವತಂತ್ರವಾದ ಮತ್ತು ಬಂಧಿತವಾದ ಎಲ್ಲಾ ಆತ್ಮಗಳ ಅಂತಿಮ ಗುರಿಯೂ ದೇವರೇ ಎಂಬುದನ್ನೂ ಮನಸ್ಸಿಗೆ ಮಂದಟ್ಟು ಮಾಡಿಕೊಡಲು ಪ್ರಯತ್ನಿಸಬೇಕು. ಆಗ ಮಾತ್ರ ಸಮಷ್ಟಿ ಪ್ರೇಮವನ್ನು ಸಾಧಿಸಲು ಸಾಧ್ಯವಾಗುವುದು. ಆದುದರಿಂದ ದೇವರು ಸಮಷ್ಟಿಯೆಂದೂ ಕಣ್ಣಿಗೆ ಕಾಣುತ್ತಿರುವ ಈ ಜಗತ್ತು ಭಗವಂತನ ಬಾಹ್ಯ ಪ್ರಕಟನೆಯೆಂದೂ ಭಕ್ತನು ಹೇಳುತ್ತಾನೆ. ಆ ಸಮಷ್ಟಿಯನ್ನು ಮಾತ್ರ ನಾವು ಪ್ರೀತಿಸಬಲ್ಲೆವಾದರೆ, ಆಗ ಸಮಸ್ತವನ್ನೂ ಪ್ರೀತಿಸಲು ನಮಗೆ ಸಾಧ್ಯವಾಗುವುದು. ಆಗ ಪ್ರಪಂಚವನ್ನು ಪ್ರೀತಿಸಿ ಅದಕ್ಕೆ ಒಳ್ಳೆಯದನ್ನು ಮಾಡಲು ನಮಗೆ ಸುಲಭವಾಗಿ ಸಾಧ್ಯವಾಗುವುದು. ಆದರೆ ಆ ಶಕ್ತಿಯನ್ನು ಸಂಪಾದಿಸಬೇಕಾದರೆ ಮೊದಲು ನಾವು ದೇವರನ್ನು ಪ್ರೀತಿಸಬೇಕು. ಯಾಕೆಂದರೆ ಅದರ ಹೊರತು ಪ್ರಪಂಚವನ್ನು ಪ್ರೀತಿಸಲು ನಮಗೆ ಸಾಧ್ಯವಾಗುವುದಿಲ್ಲ. "ಸಮಸ್ತವೂ ಅವನದು. ಅವನೇ ನನ್ನ ಪ್ರಿಯನು. ನಾನು ಅವನನ್ನು ಪ್ರೀತಿಸುತ್ತೇನೆ" ಎಂಬುದಾಗಿ ಭಕ್ತನು ಹೇಳುತ್ತಾನೆ. ಸ್ವಲ್ಪ ಕಾಲದೊಳಗೆ ಜಗತ್ತಿನ ಎಲ್ಲಾ ವಸ್ತುಗಳೂ ಅವನಿಗೆ ಪವಿತ್ರವಾಗುತ್ತವೆ. ಯಾಕೆಂದರೆ ಅವುಗಳೆಲ್ಲಾ ಆ ಭಗವಂತನ ಬಾಹ್ಯ ಪ್ರಕಟನೆಗಳೇ, ಪ್ರತಿರೂಪಗಳೆ. ಅವನು ಅವುಗಳಾವುದನ್ನೂ ಹೇಗೆ ತಾನೆ ದ್ವೇಷಿಸಬಲ್ಲನು? ಹೀಗೆ ದೇವರ ಪ್ರೇಮದೊಂದಿಗೆ, ಜಗತ್ತಿನ ಎಲ್ಲರಲ್ಲೂ ಅವನಿಗೆ ಪ್ರೇಮ

ವುಂಟಾಗುತ್ತದೆ. ಅವನು ದೇವರ ಹತ್ತಿರ ಹತ್ತಿರಕ್ಕೆ ಹೋದಂತೆಲ್ಲಾ ಎಲ್ಲಾ ವಸ್ತುಗಳೂ ದೇವರಲ್ಲೇ ಇವೆ ಎಂಬುದು ಅವನಿಗೆ ಹೆಚ್ಚು ಹೆಚ್ಚು ಸ್ಪಷ್ಟವಾಗಿ ಗೊತ್ತಾಗುತ್ತದೆ. ಹೀಗೆ ಭಕ್ತನಿಗೆ ಬರಬರುತ್ತಾ ಅತ್ಯಂತ ಶ್ರೇಷ್ಠವಾದ ಪ್ರೇಮದ ಪರಾಕಾಷ್ಠೆಯು ಅನುಭವವುಂಟಾದಾಗ, ಅವನಿಗೆ ಸಮಸ್ತವಸ್ತುಗಳಲ್ಲೂ ದೇವರು ಇರುವುದು ಕಾಣಲು ಪ್ರಾರಂಭವಾಗುತ್ತದೆ. ಅವನ ಹೃದಯವು ಪ್ರೇಮದ ಚಿಲುಮೆಯಂತಾಗುತ್ತದೆ. ಆದುದರಿಂದ ನಾವು ಪ್ರೇಮದ ಆ ಎತ್ತರದ ಮಟ್ಟವನ್ನು ಮುಟ್ಟಿದಾಗ ಪ್ರಪಂಚದ ವಸ್ತುಗಳಲ್ಲಿ ಒಂದಕ್ಕೊಂದಕ್ಕೆ ಇರುವ ವ್ಯತ್ಯಾಸವು ಮಾಯವಾಗುತ್ತದೆ. ಆಗ ಮನುಷ್ಯನು ಮನುಷ್ಯನಂತೆ ಕಾಣುವುದಿಲ್ಲ. ದೇವರಂತೆ ಕಾಣುತ್ತಾನೆ. ಪಶುಗಳು ಪಶುಗಳಂತೆ ಕಾಣುವುದಿಲ್ಲ. ದೇವರಂತೆ ಕಾಣುತ್ತವೆ. ಹುಲಿಯು ಹುಲಿಯಂತೆ ಕಾಣುವುದಿಲ್ಲ. ದೇವರ ಒಂದು ಆಕಾರವಾಗಿ ಕಾಣುತ್ತದೆ. ಈ ರೀತಿಯಾಗಿ ಈ ಭಕ್ತಿಯ ಪರಾಕಾಷ್ಠದೆಸೆಯಲ್ಲಿ ಸ್ವಾಭಾವಿಕವಾದ ಪೂಜೆಯು ಎಲ್ಲ ಪ್ರಾಣಿಗಳಿಗೂ ಭಕ್ತನಿಂದ ಅರ್ಪಿಸಲ್ಪಡುತ್ತದೆ. "ಹರಿಯು ಎಲ್ಲಾ ಜೀವಗಳಲ್ಲೂ ಇರುವುದನ್ನು ತಿಳಿದು ಪಂಡಿತರು ಎಲ್ಲಾ ಜೀವಿಗಳನ್ನು ಪ್ರೀತಿಸುತ್ತಾರೆ." ‡

ಈ ತೀವ್ರವಾದ, ಸಮಸ್ತಜಗತ್ತೂ ತನ್ನದೇ ಎನ್ನುವ ಪ್ರೇಮದ ಫಲವಾಗಿ ಭಕ್ತನಿಗೆ ಭಗವಂತನಲ್ಲೇ ಪೂರ್ಣವಾದ ಇರುವಿಕೆಯೂ ಜಗತ್ತಿನಲ್ಲಿ ನಡೆಯುವುದಾವುದೂ ತನಗೆ ವಿರೋಧವಲ್ಲವೆಂಬ ಅಪ್ರಾತಿಕೂಲ್ಯಭಾವವೂ ಉಂಟಾಗುತ್ತವೆ. ಆಗ ಮಾತ್ರ ಪ್ರೇಮಪೂರ್ಣವಾದ ಆತ್ಮಕ್ಕೆ ನೋವು ಬರುತ್ತಿರುವುದನ್ನು ನೋಡಿ 'ನೋವೆ ಬಾ' ಎಂದೂ ದುಃಖವು ಬರುತ್ತಿರುವುದನ್ನು ನೋಡಿ 'ದುಃಖವೇ ಬಾ' ಎಂದೂ, ಹಾವು ಬರುತ್ತಿರುವುದನ್ನು ನೋಡಿ 'ಹಾವೇ ಬಾ' ಎಂದೂ ಕೊನೆಗೆ ಮರಣವು ಬಂದರೂ 'ನೀನೂ ಭಗವಂತನಿಂದಲೇ ಬಂದವನು ಬಾ' ಎಂದೂ ಹೇಳುವ ಶಕ್ತಿಯುಂಟಾಗುತ್ತದೆ. ಆಗ ಭಕ್ತನು ಆ ಬರುವುವುಗಳನ್ನೆಲ್ಲಾ ನೋಡಿ 'ಅವುಗಳೆಲ್ಲಾ ನನ್ನ ಬಳಿಗೆ ಬರುತ್ತಿವೆ. ಅವುಗಳಿಗೆ ಸ್ವಾಗತ. ನಾನೇ

‡ ಏವಂ ಸರ್ವೇಷು ಭೂತೇಷು ಭಕ್ತಿರವ್ಯಭಿಚಾರಿಣೀ ।
ಕರ್ತವ್ಯಾ ಪಂಡಿತೈಃ ಜ್ಞಾತ್ವಾ ಸರ್ವಭೂತಮಯಂ ಹರಿಂ ॥

ಧನ್ಯ' ಎಂದು ಹೇಳುತ್ತಾನೆ. ಈ ರೀತಿಯಾಗಿ ಭಗವಂತನಲ್ಲೇ ಪೂರ್ಣವಾದ ಮನಸ್ಸನ್ನಿಟ್ಟು ಎಲ್ಲವೂ ಅವನದೇ ಎಂದು ನಂಬಿರುವ ಭಕ್ತನಿಗೆ ಸುಖ ಮತ್ತು ದುಃಖ ಎರಡೂ ಒಂದೇ ಆಗಿ ತೋರುತ್ತವೆ. ಆಗ ಅವನಿಗೆ ನೋವು ದುಃಖ ಇವುಗಳನ್ನು ಕುರಿತು ಅಸಮಾಧಾನವುಂಟಾಗುವುದಿಲ್ಲ. ದೇವರಲ್ಲಿ ಈ ಬಗೆಯಾದ ಅಸಮಾಧಾನವಿಲ್ಲದ ವೈರಾಗ್ಯವನ್ನು ತಾಳುವುದು, ಜಗತ್ತಿನ ಶೂರರಿಗೆ ದೊರಕಬಹುದಾದ ಕೀರ್ತಿಗಿಂತಲೂ ಸಾವಿರಪಾಲು ಹೆಚ್ಚಾದುದು.

ಮನುಷ್ಯರಲ್ಲಿ ಬಹುಮಂದಿಗೆ ದೇಹವೇ ಸರ್ವಸ್ವ. ದೇಹವೇ ಅವರಿಗೆ ಪೂರ್ಣಪ್ರಪಂಚ. ದೇಹದ ಸೌಖ್ಯವನ್ನು ಗಳಿಸಿಕೊಳ್ಳುವುದೇ ಜೀವನದ ಒಂದೇ ಗುರಿ. ದೇಹಕ್ಕೂ ಇಂದ್ರಿಯ ಸೌಖ್ಯಕ್ಕೂ ಬೇಕಾದುದನ್ನು ನಾವು ಪೂಜಿಸುವಂತೆ ಮಾಡುವ ಪಿಶಾಚಿಯು ನಮ್ಮನ್ನೆಲ್ಲಾ ಹೊಕ್ಕಿದೆ. ನಾವು ಮಹತ್ತರವಾದ ಮಾತುಗಳನ್ನಾಡುತ್ತ ವಿವೇಕದ ಆಕಾಶದಲ್ಲಿ ಹಾರಾಡಬಹುದು. ಆದರೆ ನಮ್ಮ ಮನಸ್ಸು ಮಾತ್ರ ರಣಹದ್ದಿನಂತೆ ಕೆಳಗೆ ಬಿದ್ದಿರುವ ಹೆಣದ ಮಾಂಸದ ಕಡೆಯೇ ಇರುತ್ತದೆ. ಉದಾಹರಣೆಗೆ, ನಮ್ಮ ದೇಹವನ್ನು ಹುಲಿಯ ಕೈಯಿಂದ ಯಾಕೆ ಉಳಿಸಬೇಕು. ಹುಲಿಯು ಹಸಿವನ್ನು ಅಡಗಿಸಲು ಅದಕ್ಕೆ ಯಾಕೆ ನಾವು ನಮ್ಮ ದೇಹವನ್ನು ಕೊಟ್ಟುಬಿಡಬಾರದು. ಅದರಿಂದ ಹುಲಿಗೂ ತುಂಬ ತೃಪ್ತಿಯುಂಟಾಗುತ್ತದೆ. ಅದಕ್ಕೂ ಪೂಜೆ, ತ್ಯಾಗ ಇದಕ್ಕೂ ತುಂಬ ಅಂತರವಿದೆಯೆ? ಸ್ವಾರ್ಥದ ವಾಸನೆಯೆ ಪೂರ್ಣವಾಗಿ ಇಲ್ಲದ ಆ ಎತ್ತರಕ್ಕೆ ಹೋಗಲು ನಮಗೆ ಸಾಧ್ಯವಿಲ್ಲವೆ? ಪ್ರೇಮದ ಜಗತ್ತಿನಲ್ಲಿ ಅದು ಅತ್ಯಂತ ಎತ್ತರವಾದ ಶಿಖರ. ಈ ಜಗತ್ತಿನಲ್ಲಿ ಎಲ್ಲೋ ಅಲ್ಪ ಮಂದಿ ಅದನ್ನು ಮುಟ್ಟಿದ್ದಾರೆ. ಆದರೆ ಮನುಷ್ಯನು, ಯಾವಾಗಲೂ ಸಂತೋಷದಿಂದ ದೇಹವನ್ನು ತ್ಯಾಗ ಮಾಡಲು ಸಿದ್ಧನಾಗಿರುವ ಆ ಮಟ್ಟವನ್ನು ಮುಟ್ಟಿದ ಹೊರತು, ಅವನು ಪೂರ್ಣ ಭಕ್ತನಾಗಲಾರನು. ನಾವು ನಮ್ಮ ದೇಹಗಳನ್ನು ಬಹಳ ಉತ್ತಮವಾಗಿಯೇ ನೋಡಿಕೊಳ್ಳಬಹುದು. ಆದರೆ ಅವು ಹೋಗುವ ಕಾಲವು ಬಂದೇಬರುತ್ತದೆ. ಯಾಕೆಂದರೆ ಅವು ಶಾಶ್ವತವಾದವುಗಳಲ್ಲ.

ಯಾರ ದೇಹಗಳು ಇತರರ ಸೇವೆಗಾಗಿ ವಿನಿಯೋಗವಾಗುತ್ತವೋ ಅವರೇ ಧನ್ಯರು. ಮಹನೀಯರು ಐಶ್ವರ್ಯವನ್ನೂ, ದೇಹವನ್ನೇ ಇತರರ ಸೇವೆಗಾಗಿ ಅರ್ಪಿಸಲು ಸಿದ್ಧರಾಗಿರುತ್ತಾರೆ. ಜಗತ್ತಿನಲ್ಲಿ ಮರಣವು ಖಂಡಿತವಾದುದು. ಆದುದರಿಂದ ದುಷ್ಕಾರ್ಯದಲ್ಲಿ ಮಡಿಯುವುದಕ್ಕಿಂತ ಸತ್ಕಾರ್ಯದಲ್ಲಿ ಮಡಿಯುವುದು ಉತ್ತಮ, ನಮ್ಮ ಜೀವವನ್ನು ನಾವು ಐವತ್ತು ವರುಷಗಳು ನೂರು ವರುಷಗಳು ಎಳೆದುಕೊಂಡು ಜೀವಿಸಬಹುದು. ಆದರೆ ಆಮೇಲೆ ಏನು? ಮರಣವೆ. ಹೌದು; ಅನೇಕ ಇತರ ಪದಾರ್ಥಗಳ ಸಂಯೋಗದಿಂದ ಆಗಿರುವ ಪ್ರತಿಯೊಂದು ವಸ್ತುವೂ ಕೊನೆಯಲ್ಲಿ ಆಯಾ ಪದಾರ್ಥಗಳೊಂದಿಗೆ ಸೇರಲೇಬೇಕು. ಮರಣವನ್ನು ಹೊಂದಲೇಬೇಕು. ಜೀಸಸ್, ಬುದ್ಧ, ಮಹಮ್ಮದ್ ಮುಂತಾದ ಪ್ರಪಂಚದ ಶ್ರೇಷ್ಠಧರ್ಮಸ್ಥಾಪಕರ ದೇಹಗಳೆಲ್ಲಾ ಇದೇ ದಾರಿಯನ್ನು ಹಿಡಿದಿದೆ. ಆದುದರಿಂದ, ಎಲ್ಲವೂ ನಾಶವಾಗುತ್ತಿರುವ ಈ ನಶ್ವರವಾದ ಪ್ರಪಂಚದಲ್ಲಿ ನಮ್ಮ ಕಾಲವನ್ನು ಉತ್ತಮವಾಗಿ ವಿನಿಯೋಗಿಸಬೇಕೆಂದೂ, ಜೀವನದ ಶ್ರೇಷ್ಠವಾದ ಗುರಿಯು ದೇಹವನ್ನು ಇತರರ ಸೇವೆಗೆ ಅರ್ಪಿಸುವುದೇ ಆಗಿದೆಯೆಂದೂ ಭಕ್ತನು ಹೇಳುತ್ತಾನೆ. ಆದರೆ ನಾವು ಸೇವೆ ಮಾಡಲು ಅವಕಾಶ ಕೊಡದೆ, ಜಗತ್ತಿನಲ್ಲಿ ಸ್ವಾರ್ಥವನ್ನು ಬಿತ್ತುವುದು ಈ ದೇಹವೆಂಬ ಭಾವನೆಯೂ, ದೇಹವನ್ನು ಎಲ್ಲಾ ವಿಧದಿಂದಲೂ ತುಷ್ಟಿಪಡಿಸಿ ಉಳಿಸಿಕೊಳ್ಳಬೇಕೆಂಬ ಭಾವನೆಯೂ ಆಗಿದೆ. ಯಾಕೆಂದರೆ ನಾವು ಆತ್ಮ ದೇಹವಲ್ಲ ಎಂಬ ನಂಬಿಕೆ ನಮಗೆ ಸ್ಪಷ್ಟವಾಗಿಯೂ ಪೂರ್ಣವಾಗಿಯೂ ಉಂಟಾದರೆ, ಆಗ ನಮಗೆ ಯಾರೂ ಶತ್ರುಗಳು ಇರುವುದಿಲ್ಲ. ಸ್ವಾರ್ಥದ ಯೋಚನೆಗಳು ನಮ್ಮಿಂದ ಮರೆಯಾಗುತ್ತವೆ. ಆದುದರಿಂದ ನಮ್ಮ ಭಾಗಕ್ಕೆ ಪ್ರಪಂಚದ ಎಲ್ಲಾ ವಸ್ತುಗಳೂ ಸತ್ತಂತೆಯೇ ನಾವು ಭಾವಿಸಬೇಕೆಂದು ಭಕ್ತನು ಹೇಳುತ್ತಾನೆ. ಅದೇ ಆತ್ಮಾರ್ಪಣ. ನಿನ್ನ ಇಚ್ಛೆ ನಡೆಯಲಿ ಎಂಬುದರ ಅರ್ಥವಾದರೂ ಅದೆಯೆ. ನಮ್ಮ ದೌರ್ಬಲ್ಯ ಮತ್ತು ಆಸೆಗಳೂ ಭಗವಂತನ ಇಚ್ಛೆಯೆಂದು ಅದಕ್ಕಾಗಿ ಹೊಡೆದಾಡುವುದಲ್ಲ. ನಮ್ಮ ಸ್ವಾರ್ಥದ ಹೊಡೆದಾಟದಿಂದ ಕೂಡ ಒಳ್ಳೆಯದಾಗ

ಬಹುದು. ಆದರೆ ಅದು ದೇವರ ಅಪಾರವಾದ ದಯೆಯಿಂದಲೇ ಹೊರತು ನಮ್ಮ ಯೋಗ್ಯತೆಯಿಂದಲ್ಲ. ಆದುದರಿಂದ ಶ್ರೇಷ್ಠನಾದ ಭಕ್ತನ ಅಭಿಪ್ರಾಯವು ತನಗಾಗಿ ಏನನ್ನು ಬಯಸುವುದೂ ಅದಕ್ಕಾಗಿ ಕೆಲಸ ಮಾಡುವುದೂ ಇಲ್ಲದುದಾಗಿರಬೇಕು. ಭಕ್ತನ ಹೃದಯದ ಆಳದಿಂದ ಈ ಪ್ರಾರ್ಥನೆ ಹೊರಡುತ್ತದೆ. "ಭಗವಂತ ಅವರು ನಿನ್ನ ಹೆಸರಿನಲ್ಲಿ ದೊಡ್ಡ ದೇವಾಲಯಗಳನ್ನು ಕಟ್ಟಿ ಕಾಣಿಕೆಗಳನ್ನು ಅರ್ಪಿಸುತ್ತಾರೆ. ನಾನು ಬಡವ. ನನ್ನಲ್ಲಿ ಏನೂ ಇಲ್ಲ. ಆದುದರಿಂದ ನಾನು ನನ್ನ ಈ ದೇಹವನ್ನೇ ನಿನ್ನ ಪವಿತ್ರವಾದ ಪಾದಗಳಲ್ಲಿ ಅರ್ಪಿಸುತ್ತೇನೆ. ನನ್ನನ್ನು ಬಿಡಬೇಡ ಭಗವಂತಾ" ನಿಜವಾಗಿಯೂ ಈ ಬಗೆಯಾದ ಶಾಶ್ವತವಾದ, ಭಗವಂತನಿಗಾಗಿ ಮಾಡಿದ ತ್ಯಾಗವೂ ಯಜ್ಞವೂ ಪ್ರಪಂಚದ ಧನ ಮತ್ತು ವಿದ್ಯೆಗಳ ಕಾಣಿಕೆಗಳಿಗಿಂತ ಅನೇಕ ಪಾಲು ಉತ್ತಮವಾದುದು. ಭಕ್ತನ ಮನಸ್ಸಿನ ಶಾಂತಿಯು ಊಹಿಸುವುದಕ್ಕೆ ಅಸಾಧ್ಯವಾದುದು ಮತ್ತು ಅಮೌಲ್ಯವಾದುದು. ಈ ಆತ್ಮಾರ್ಪಣದ ಸ್ಥಿತಿಯಲ್ಲಿ ಭಕ್ತನು ಅಪ್ರಾತಿಕುಲ್ಯನಾಗುತ್ತಾನೆ. ಆಗ ಜಗತ್ತಿನ ಯಾವ ವಸ್ತುಗಳಲ್ಲೂ ಅವನಿಗೆ ಆಸೆಯಿರುವುದಿಲ್ಲ ಸ್ವಾಭಾವಿಕವಾಗಿ ತನಗೆ ವಿರೋಧವಾದುದೇ ಯಾವುದೂ ಇಲ್ಲವೆಂದು ಅವನಿಗೆ ಗೊತ್ತಾಗುತ್ತದೆ. ಈ ಪವಿತ್ರವಾದ ಆತ್ಮಾರ್ಪಣದ ಸ್ಥಿತಿಯಲ್ಲಿ ಸಮಸ್ತವಾದ ಆಸೆ ಬಂಧನಗಳೂ ಬಿಟ್ಟು ಹೋಗುತ್ತವೆ. ಆಗ ಉಳಿಯುವುದು ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾದ ಭಗವಂತನಲ್ಲಿ ಪೂರ್ಣವಾದ ಪ್ರೇಮ ಮಾತ್ರ. ಭಗವಂತನಲ್ಲಿಟ್ಟ ಈ ಪ್ರೇಮವು ಆತ್ಮನನ್ನು ಬಂಧಿಸುವುದಿಲ್ಲ. ನಿಶ್ಚಯವಾಗಿಯೂ ಆತ್ಮದ ಎಲ್ಲಾ ಬಂಧನಗಳನ್ನೂ ಪೂರ್ಣವಾಗಿ ಬಿಡಿಸುತ್ತದೆ.

---

# ೧೬ ಪರಜ್ಞಾನವೂ ಪರಭಕ್ತಿಯೂ ಎರಡೂ ಒಂದೇ

ಉಪನಿಷತ್ತುಗಳು ನಮಗೆ ಎರಡು ವಿಧವಾದ ಜ್ಞಾನವನ್ನು ಕಲಿಸುತ್ತವೆ. ಅವೇ ಪರಾ (ಉತ್ತಮ) ಅಪರಾ (ಅಧಮ) ಜ್ಞಾನಗಳು. ಉಪನಿಷತ್ತುಗಳು ಹೇಳುವ ಉತ್ತಮ ಜ್ಞಾನಕ್ಕೂ ಭಕ್ತನ ಮೇಲು ದರ್ಜೆಯ ಪರಾಭಕ್ತಿಗೂ ಏನೂ ವ್ಯತ್ಯಾಸವಿಲ್ಲ. ಮುಂಡಕ ಉಪನಿಷತ್ತಿನಲ್ಲಿ ಹೀಗೆ ಹೇಳಿದೆ. "ಬ್ರಹ್ಮಜ್ಞಾನವನ್ನು ಅರಿತವರು ತಿಳಿಯಲು ಅರ್ಹವಾದುದು ಪರಾ ಮತ್ತು ಅಪರ ಎಂಬ ಎರಡು ವಿಧವಾದ ಜ್ಞಾನಗಳು. ಇವುಗಳ ಪೈಕಿ ಅಪರಾ ಜ್ಞಾನದಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಶಿಕ್ಷಾ, ಕಲ್ಪ, ವ್ಯಾಕರಣ ನಿರುಕ್ತ ಜ್ಯೋತಿಷ ಇವುಗಳು ಸೇರಿವೆ. ಯಾವುದರಿಂದ ನಿರಾಕಾರನಾದ ಪರಮಾತ್ಮನನ್ನು ತಿಳಿಯಬಹುದೋ ಅದೇ ಪರಾಜ್ಞಾನ. ಆದುದರಿಂದ ಪರಾಜ್ಞಾನವು ಬ್ರಹ್ಮಜ್ಞಾನವೆಂದು ಸ್ಪಷ್ಟವಾಗಿ ತೋರಿಸಿದುದಾಯಿತು. ದೇವೀಭಾಗವತದಲ್ಲಿ ಉತ್ತಮವಾದ ಪರಾ ಭಕ್ತಿಯು ಹೀಗೆ ವರ್ಣಿತವಾಗಿದೆ· "ಒಂದು ಪಾತ್ರೆಯಿಂದ ಮತ್ತೊಂದು ಪಾತ್ರೆಗೆ ಎಣ್ಣೆಯನ್ನು ಹುಯ್ದರೆ ಅದು ಹೇಗೆ ಬಿಡುವಿಲ್ಲದೆ ಒಂದೇ ಸಮವಾಗಿ ಬೀಳುತ್ತದೋ ಹಾಗೆಯೇ ಮನಸ್ಸು ಬಿಡುವಿಲ್ಲದೆ ಭಗವಂತನನ್ನೇ ಕುರಿತು ಧ್ಯಾನಿಸುತ್ತಿದ್ದರೆ ಆಗ ಆ ಸ್ಥಿತಿಗೆ ಪರಾಭಕ್ತಿ ಎಂದು ಹೆಸರು. ದೇವರಲ್ಲಿ ನಿಕಟವಾದ ಪ್ರೇಮವನ್ನಿಟ್ಟು ನಮ್ಮ ಹೃದಯವನ್ನೂ ಮನಸ್ಸನ್ನೂ ಶಾಶ್ವತವಾಗಿ ಅವನ ಕಡೆಗೆ ತಿರುಗಿಸುವುದು ಭಕ್ತಿಯ ಮೇಲಿನ ಮೆಟ್ಟಲು. ಇತರ ಬಗೆಯಾದ ಭಕ್ತಿಗಳೆಲ್ಲಾ ಈ ಪರಾಭಕ್ತಿಗೆ ಮೆಟ್ಟಿಲುಗಳಂತೆ. ಪರಾಭಕ್ತಿಗೆ ರಾಗಾನುಗಾ ಎಂದು ಹೆಸರು. ಮನುಷ್ಯನ ಹೃದಯದಲ್ಲಿ ಇಂತಹ ಪ್ರೇಮವುಂಟಾದಾಗ ಅವನ ಮನಸ್ಸು ಯಾವಾಗಲೂ ದೇವರನ್ನೇ ಧ್ಯಾನಿಸುತಿರುತ್ತದೆ. ಅವನಿಗೆ ಉಳಿದವುಗಳಾವುದೂ ಜ್ಞಾಪಕದಲ್ಲಿರುವುದಿಲ್ಲ. ಅವನು ದೇವರನ್ನು ಹೊರತು ಉಳಿದ ವಿಷಯಗಳನ್ನು ಮನಸ್ಸಿನೊಳಕ್ಕೆ ಸೇರಿಸುವುದೆ

ಇಲ್ಲ. ಅವನ ಆತ್ಮವು ಪರಿಶುದ್ಧವಾದುದಾಗಿ ಎಲ್ಲಾ ಬಂಧನಗಳನ್ನು ಬಿಡಿಸಿಕೊಂಡು ಶಾಂತವೂ ಸ್ವತಂತ್ರವೂ ಆಗುತ್ತದೆ. ಅಂತಹ ಭಕ್ತನು ಮಾತ್ರ ದೇವರನ್ನು ಹೃದಯದಲ್ಲೇ ಪೂಜಿಸಲು ಶಕ್ತನು. ಅಂಥವನಿಗೆ ವಿಗ್ರಹ, ದೇವರ ಆಕಾರ, ಪುಸ್ತಕ, ನಿಯಮ ಇವುಗಳೆಲ್ಲಾ ಯಾವ ವಿಧದಿಂದಲೂ ಉಪಯೋಗಕ್ಕೆ ಬರದವಗಳಾಗುತ್ತವೆ. ಆದರೆ ದೇವರನ್ನು ಹೀಗೆ ಪ್ರೀತಿಸಿ ಪೂಜಿಸುವುದು ಸುಲಭವಲ್ಲ.

ಪ್ರೇಮಕ್ಕೆ ಎಲ್ಲಿ ಪ್ರತಿಪ್ರೇಮವುಂಟೊ ಅಂತಹಕಡೆ ಮಾತ್ರ ಮನುಷ್ಯರು ಪ್ರೀತಿಸುತ್ತಾರೆ. ಪ್ರೇಮಕ್ಕೆ ಎಲ್ಲಿ ಪ್ರೇಮದ ಪ್ರತ್ಯುತ್ತರವಿಲ್ಲವೋ ಅಲ್ಲಿ ಔದಾಸೀನ್ಯವು ಸ್ವಾಭಾವಿಕವಾಗುತ್ತದೆ. ಆದರೆ ಪ್ರತಿ ಪ್ರೇಮವು ದೊರಕದಿದ್ದರೂ, ತಾನು ಮಾತ್ರ ಪ್ರೀತಿಸುವ ಉದಾಹರಣೆಗಳೂ ಬಹಳ ವಿರಳವಾಗಿ ದೊರಕುತ್ತವೆ. ಈ ಬಗೆಯ ಪ್ರೇಮವನ್ನು ನಾವು ಉದಾಹರಣೆಗಾಗಿ ಪತಂಗದ ಹುಳುವಿಗೆ ಜೆಂಕಿಯಲ್ಲಿರುವ ಪ್ರೇಮದೊಡನೆ ಹೋಲಿಸಬಹುದು. ಆ ಹುಳುವು ಜೆಂಕಿಯನ್ನು ಪ್ರೀತಿಸಿ ಅದರಲ್ಲಿ ಬಿದ್ದು ಸಾಯುತ್ತದೆ· ಯಾಕೆಂದರೆ ಜೆಂಕಿಯನ್ನು ಹಾಗೆ ಪ್ರೀತಿಸುವುದೇ ಅದರ ಸ್ವಭಾವ. ಸ್ವಾಭಾವಿಕವಾಗಿ ಪ್ರೀತಿಸುವುದಕ್ಕಾಗಿಯೇ ಪ್ರೀತಿಸುವುದು ಸ್ವಾರ್ಥವಿಲ್ಲದ ಪ್ರೇಮದ ಪರಾಕಾಷ್ಠೆಯ ನಿದರ್ಶನ. ಭಕ್ತಿಯ ದಾರಿಯಲ್ಲಿ ಆ ಪ್ರೇಮವು ಹೊರಟಾಗ ಭಕ್ತನಿಗೆ ಪರಾಭಕ್ತಿಯು ಸಿದ್ಧಿಸುತ್ತದೆ.

## ೧೭ ಪ್ರೇಮ ತ್ರಿಕೋಣ

ಪ್ರೇಮವು ತ್ರಿಕೋಣವೆಂಬುದಾಗಿಯೂ, ತ್ರಿಕೋಣದ ಮೂರು ಕೋಣಗಳಿಗೂ ಭಕ್ತಿಯ ಮೂರು ಗುಣಗಳು ಸಮಾನವೆಂಬುದಾಗಿಯೂ ಹೇಳಬಹುದು. ಮೂರು ಕೋಣಗಳಿಲ್ಲದೆ ತ್ರಿಕೋಣವು ಎಂದಿಗೂ ಆಗಲಾರದು.ಹಾಗೆಯೇ ಮುಂದೆ ಹೇಳುವ ಮೂರು ಗುಣಗಳಿಲ್ಲದೆ ನೈಜವಾದ ಭಕ್ತಿಯು ಉಂಟಾಗಲಾರದು. ಈ ಪ್ರೇಮವೆಂಬ ತ್ರಿಕೋಣದ ಮೊದಲನೇ ಕೋಣವೆಂದರೆ ಪ್ರೇಮವು ವ್ಯಾಪಾರದ ಸ್ವಭಾವದುದಲ್ಲ. ಎಲ್ಲಿ ಪ್ರೇಮಕ್ಕೆ

ಪ್ರತಿಯಾಗಿ ಅಪೇಕ್ಷೆಗಳೂ ಆಸೆಗಳೂ ಇವೆಯೋ ಅಲ್ಲಿ ಎಂದಿಗೂ ನೈಜ ವಾದ ಪ್ರೇಮವುಂಟಾಗಲಾರದು. ಆಗ ಅದು ಬರಿಯ ಅಂಗಡಿ ವ್ಯಾಪಾರ ವಾಯಿತು. ಆದುದರಿಂದ ನಮ್ಮ ಭಕ್ತಿಯಿಂದ ಎಲ್ಲಿಯವರೆಗೆ ನಮಗೆ ದೇವರಿಂದ ಬಗೆ ಬಗೆಯ ಪ್ರಯೋಜನಗಳುಂಟಾಗಬೇಕೆಂಬ ನಿರೀಕ್ಷಣೆ ಯಿದೆಯೋ ಅಲ್ಲಿಯವರೆಗೆ ದೇವರಲ್ಲಿ ನಮಗೆ ನೈಜವಾದ ಪ್ರೇಮವುಂಟಾಗ ಲಾರದು. ತನಗೆ ಪ್ರತಿಫಲಗಳುಂಟಾಗಲೆಂದು ಯಾರು ದೇವರನ್ನು ಪ್ರೀತಿಸುತ್ತಾರೋ ಅಂಥವರು ಪ್ರತಿಫಲಗಳು ದೊರೆಯದಿದ್ದರೆ ಅವ ನನ್ನು ಖಂಡಿತವಾಗಿಯೂ ಪೂಜಿಸುವುದಿಲ್ಲ. ದೇವರು ಪ್ರೀತಿಗೆ ಅರ್ಹ ನೆಂಬ ಒಂದೇ ಕಾರಣದಿಂದಲೆ ಭಕ್ತನು ಅವನನ್ನು ಪ್ರೀತಿಸುತ್ತಾನೆ. ಅವ ನಿಗೆ ಬೇರೆ ಆಸೆಗಳು ಇಲ್ಲ. ನಿಜವಾದ ಭಕ್ತನಿಗೆ ಈ ದೈವೀಭಾವದ ಹೊರತು ಬೇರೆ ಭಾವಗಳಿರುವುದಿಲ್ಲ. ನಾವೆಲ್ಲಾ ಈ ಕಥೆಯನ್ನು ಕೇಳಿ ದ್ದೇವೆ. 'ಒಬ್ಬ ರಾಜನು ಒಂದು ಸಲ ಕಾಡಿಗೆ ಹೋಗಿದ್ದಾಗ ಅಲ್ಲಿ ಒಬ್ಬ ಋಷಿಯು ಅವನ ಕಣ್ಣಿಗೆ ಬಿದ್ದನು. ಋಷಿಯೊಡನೆ ಮಾತನಾಡಿದ ನಂತರ ರಾಜನಿಗೆ ಋಷಿಯ ಜ್ಞಾನದಲ್ಲೂ ಪವಿತ್ರತೆಯಲ್ಲೂ ತುಂಬ ಗೌರವವುಂಟಾಯಿತು. ನನ್ನ ಕಾಣಿಕೆಗಳನ್ನು ಸ್ವೀಕರಿಸಿ ನನ್ನನ್ನು ಧನ್ಯ ನನ್ನಾಗಿ ಮಾಡಬೇಕೆಂದು ಋಷಿಯನ್ನು ದೊರೆಯು ಪ್ರಾರ್ಥಿಸಿದನು. ಋಷಿಯು ಅದಕ್ಕೆ ಒಪ್ಪಲಿಲ್ಲ. ಅವನು ದೊರೆಯೇ ಕಾಡಿನ ಹಣ್ಣುಗಳು ನನಗೆ ಸಾಕು. ಬೆಟ್ಟಗಳಿಂದ ಹರಿದು ಬರುತ್ತಿರುವ ಝರಿಯ ನೀರು ನನಗೆ ಸಮೃದ್ಧಿಯಾಗಿದೆ. ಮರದ ತೊಗಟೆಗಳ ಉಡುಪು ನನಗೆ ಬೇಕಾದಷ್ಟಿದೆ. ಬೆಟ್ಟದ ಗವಿಗಳೆಲ್ಲಾ ನನ್ನ ಮನೆಗಳಾಗಿವೆ. ಹೀಗಿರುವಾಗ ನನಗೆ ನಿನ್ನಿಂದ ಲಾಗಲಿ ಇತರರಿಂದಾಗಲಿ ಕಾಣಿಕೆ ಯಾಕೆ ಬೇಕು?'' ಎಂದನು. ದೊರೆಯು ''ಋಷಿಯೆ, ನನ್ನನ್ನು ಪುನೀತನನ್ನಾಗಿ ಮಾಡುವುದಕ್ಕಾಗಿ ಯಾದರೂ ಅರಮನೆಗೆ ಬಂದು ನನ್ನ ಕೈಯಿಂದ ಕಾಣಿಕೆಯನ್ನು ಸ್ವೀಕರಿಸಬೇಕು'' ಎಂಬುದಾಗಿ ಪ್ರಾರ್ಥಿಸಿದನು. ದೊರೆಯು ಹೆಚ್ಚಾಗಿ ಪ್ರಾರ್ಥಿಸಿಕೊಂಡುದರಿಂದ ಋಷಿಯು ಒಪ್ಪಿ ಅವನ ಅರಮನೆಗೆ ಹೋದನು. ಅರಮನೆಯಲ್ಲಿ ಋಷಿಗೆ ಕಾಣಿಕೆಯನ್ನು ಅರ್ಪಿಸುವುದಕ್ಕೆ

ಮುಂಚೆ ದೊರೆಯು ಈ ರೀತಿ ಪ್ರಾರ್ಥನೆಯನ್ನು ಪ್ರಾರಂಭಿಸಿದನು. "ದೇವರೆ ನನ್ನ ಸಂತಾನವೃದ್ಧಿಯಾಗಲಿ, ನನ್ನ ಐಶ್ವರ್ಯವು ಹೆಚ್ಚಲಿ, ರಾಜ್ಯವು ವಿಸ್ತಾರವಾಗಲಿ, ನನ್ನ ದೇಹವು ಪೂರ್ಣಾರೋಗ್ಯದಿಂದ ಇರಲಿ." ದೊರೆಯ ಪ್ರಾರ್ಥನೆಯು ಮುಗಿಯುವುದಕ್ಕೆ ಮುಂಚೆಯೇ ಋಷಿಯು ಅರಮನೆಯನ್ನು ಬಿಟ್ಟು ಹೊರಟುಬಿಟ್ಟನು. ಅದನ್ನು ನೋಡಿ ದೊರೆಗೆ ಗಾಬರಿಯಾಯಿತು. ಋಷಿಯೇ ಕೊನೆಗೂ ನನ್ನ ಕಾಣಿಕೆಯನ್ನು ಸ್ವೀಕರಿಸದೆಯೇ ಹೋಗುತ್ತೀಯಲ್ಲ? ಎಂದು ಕೇಳಿದನು. ಆಗ ಋಷಿಯು 'ಎಲೈ ದೊರೆಯೇ, ನಾನು ತಿರುಕರಿಂದ ಭಿಕ್ಷೆ ಬೇಡುವುದಿಲ್ಲ. ನೀನೇ ಭಿಕ್ಷುಕ. ನನಗೆ ಏನನ್ನು ತಾನೆ ಕೊಡಬಲ್ಲೆ. ಭಿಕ್ಷುಕನಿಂದಲೇ ಭಿಕ್ಷವನ್ನು ತೆಗೆದುಕೊಳ್ಳುವಷ್ಟು ನಾನು ಅವಿವೇಕಿಯಲ್ಲ. ಹೋಗು ನನ್ನನ್ನು ಹಿಂಬಾಲಿಸಬೇಡ" ಎಂಬುದಾಗಿ ಹೇಳಿ ಕಾಡಿಗೆ ಹೋದನು. ಮೇಲಿನ ಕತೆಯಿಂದ ಧಾರ್ಮಿಕ ಪ್ರಪಂಚದಲ್ಲಿ, ಭಿಕ್ಷುಕರಿಗೂ ಭಕ್ತರಿಗೂ ಇರುವ ವ್ಯತ್ಯಾಸವು ಗೊತ್ತಾಗುತ್ತದೆ. ದೇವರನ್ನು ಯಾವುದಾದರೂ ಪ್ರತಿಫಲಕ್ಕಾಗಿ ಕೊನೆಗೆ ಮೋಕ್ಷದ ಪ್ರತಿಫಲಕ್ಕಾಗಿಯಾಗಲಿ ಪೂಜಿಸುವುದು, ಪ್ರೇಮದ ಉಚ್ಚವಾದ ಆದರ್ಶವನ್ನು ಕೆಳಕ್ಕೆ ಇಳಿಸಿದಂತೆಯೇ. ಯಾಕೆಂದರೆ ಪ್ರೇಮಕ್ಕೆ ಪ್ರತ್ಯಾಶೆ ಎಂಬುದು ಗೊತ್ತೇ ಇಲ್ಲ. ಅದು ಯಾವಾಗಲೂ ತನಗಾಗಿಯೇ ತಾನು ಇರುತ್ತದೆ. ಭಕ್ತನು ಪ್ರೀತಿಸುತ್ತಾನೆ. ಯಾಕೆಂದರೆ ಪ್ರೀತಿಸದೆ ಇರಲು ಅವನಿಂದ ಸಾಧ್ಯವೇ ಇಲ್ಲ. ಉದಾಹರಣೆಗೆ ನೀವು ಸುಂದರವಾದ ಒಂದು ದೃಶ್ಯವನ್ನು ನೋಡಿದಾಗ ಅದನ್ನು ಪ್ರೀತಿಸಲು ಪ್ರಾರಂಭಿಸುತ್ತೀರಿ. ಆ ದೃಶ್ಯದಿಂದ ಆಗ ನೀವು ಯಾವ ಪ್ರತಿಫಲವನ್ನೂ ಬಯಸುವುದಿಲ್ಲ. ಹಾಗೆಯೇ ಆ ದೃಶ್ಯವೂ ನಿಮ್ಮಿಂದ ಯಾವ ಪ್ರತಿಫಲವನ್ನೂ ಬಯಸುವುದಿಲ್ಲ. ಆದರೂ ಆ ದೃಶ್ಯವು, ನಿಮ್ಮ ಹೃದಯದ ಉದ್ವೇಗಗಳನೆಲ್ಲಾ ಶಮನಮಾಡಿ ನಿಮ್ಮ ಮನಸ್ಸನ್ನು ಆನಂದದ ಸ್ಥಿತಿಗೆ ತರುತ್ತದೆ. ಅದು ನಿಮಗೆ ಶಾಂತಿಯನ್ನುಂಟುಮಾಡುತ್ತದೆ. ನಿಮ್ಮ ಮನಸ್ಸನ್ನು ಒಂದು ಬಗೆಯ ದೇವತ್ವದ ಆನಂದಕ್ಕೆ ಏರಿಸಿ, ಆ ಕಾಲದ ಮಟ್ಟಿಗಾದರೂ ನೀವು ಮನುಷ್ಯತ್ವ

ವನ್ನು ಮೀರಿ ನಿಲ್ಲುವಂತೆ ಮಾಡುತ್ತದೆ. ಸ್ವಜವಾದ ಪ್ರೇಮದ ಸ್ವಭಾವವು ಆ ಬಗೆಯದಾಗಿದೆ. ಆ ಸ್ವಭಾವವೇ ಪ್ರೇಮವೆಂಬ ತ್ರಿಕೋಣದ ಮೊದಲನೆ ಕೋಣವು. ಆದುದರಿಂದ ನಿಮ್ಮ ಪ್ರೇಮಕ್ಕೆ ಪ್ರತಿಯಾಗಿ ಏನನ್ನೂ ಕೇಳಬೇಡಿ. ನೀವು ಯಾವಾಗಲೂ ದಾತರಾಗಿಯೇ ಇರಿ. ನಿಮ್ಮ ಪ್ರೇಮವನ್ನೆಲ್ಲಾ ದೇವರಲ್ಲಿ ಇಡಿ. ಆದರೆ ಅವನಿಂದಲೂ ಏನನ್ನೂ ಪ್ರತಿಯಾಗಿ ಕೇಳಬೇಡಿ.

ಪ್ರೇಮ ತ್ರಿಕೋಣದ ಎರಡನೆಯ ಕೋಣವು ಪ್ರೇಮಕ್ಕೆ ಭಯವೆಂಬುದಿಲ್ಲವೆಂಬುದು. ಭಯದಿಂದ ಯಾರು ದೇವರನ್ನು ಪ್ರೀತಿಸುತ್ತಾರೋ ಅವರು ಮನುಷ್ಯರಲ್ಲೆಲ್ಲಾ ಬಹಳ ಕೀಳಾದವರು; ಮನುಷ್ಯತ್ವವು ಪೂರ್ಣವಾಗಿ ಇಲ್ಲದವರು. ಎಲ್ಲಿ ಶಿಕ್ಷೆಯಾಗುವುದೋ ಎಂಬ ಭಯದಿಂದ ಅವರು ದೇವರನ್ನು ಪೂಜಿಸುತ್ತಾರೆ. ಅವರ ಅಭಿಪ್ರಾಯದಲ್ಲಿ ದೇವರು ಒಂದು ಕೈನಲ್ಲಿ ಚಾವಟಿಯನ್ನೂ ಮತ್ತೊಂದು ಕೈನಲ್ಲಿ ರಾಜದಂಡವನ್ನೂ ಹಿಡಿದುಕೊಂಡಿರುವ ವ್ಯಕ್ತಿ. ತಾವು ಅವನ ಆಜ್ಞೆಯನ್ನು ಪಾಲಿಸದಿದ್ದರೆ ಚಾವಟಿಯಿಂದ ಏಟುಬೀಳಬಹುದೆಂದು ಅವರಿಗೆ ಭಯ. ದೇವರನ್ನು ಹೀಗೆ ಶಿಕ್ಷೆಯ ಭಯದಿಂದ ಪೂಜಿಸುವುದು ಬಹಳ ಹೀನವಾದುದು. ಅದಕ್ಕೆ ದೇವರ ಪೂಜೆ ಎಂಬ ಹೆಸರಿದ್ದರೆ, ಅದು ಪೂಜೆಗಳಲ್ಲೆಲ್ಲಾ ಅತ್ಯಂತ ಕೆಳತರಗತಿಯದು ಮತ್ತು ಒರಟಾದುದು. ಎಲ್ಲಿಯವರೆಗೆ ಹೃದಯದಲ್ಲಿ ಭಯವು ಇರುವುದೋ ಅಲ್ಲಿಯವರೆಗೆ ಅಲ್ಲಿ ಪ್ರೇಮವೂ ಕೂಡ ಹೇಗೆ ಇರಬಲ್ಲದು? ಪ್ರೇಮವು ಸ್ವಾಭಾವಿಕವಾಗಿ ಎಲ್ಲಾ ಭಯಗಳನ್ನೂ ಜಯಿಸುತ್ತದೆ. ಬ್ರಹ್ಮಾಂಡದಿಂದ ತಾವು ಪೃಥಕ್ಕಾಗಬೇಕೆಂಬ ಸ್ವಾರ್ಥ ಭಾವನೆಯಿಂದ ಭಯವು ಉಂಟಾಗುತ್ತದೆ. ನನ್ನ ಮನಸ್ಸನ್ನು ನಾನು ಹೆಚ್ಚು ಹೆಚ್ಚಾಗಿ ಸಂಕುಚಿತವಾಗಿ ಮಾಡಿಕೊಂಡಷ್ಟೂ ನನ್ನ ಭಯವು ಹೆಚ್ಚುತ್ತದೆ. ಒಬ್ಬ ಮನುಷ್ಯನಿಗೆ ತಾನು ಕೇವಲ ಅಪ್ರಯೋಜಕನೆಂಬ ಭಾವನೆಯು ಬಂದರೆ ಭಯವು ಸ್ವಾಭಾವಿಕವಾಗಿಯೇ ಉಂಟಾಗುತ್ತದೆ. ಆ ಬಗೆಯಾಗಿ ನೀವು ಎಷ್ಟು ಕಡಮೆಯಾಗಿ ಯೋಚಿಸುತ್ತೀರೋ ನಿಮ್ಮ ಭಯವೂ ಅಷ್ಟೇ ಕಡಮೆಯಾಗುತ್ತದೆ.

ನಿಮ್ಮಲ್ಲಿ ಎಲ್ಲಿಯವರೆಗಾದರೂ ಸ್ವಲ್ಪವಾದರೂ ಭಯವಿರುವುದೋ ಅಲ್ಲಿಯವರೆಗೆ ನಿಮ್ಮಲ್ಲಿ ಪ್ರೇಮವು ಉಂಟಾಗುವುದಿಲ್ಲ. ಯಾಕೆಂದರೆ ಭಯವೂ ಪ್ರೇಮವೂ ಎಂದಿಗೂ ಎಲ್ಲೂ ಒಟ್ಟಾಗಿರಲಾರವು. ಆದುದ ರಿಂದ ದೇವರನ್ನು ಪ್ರೀತಿಸುವವರು ಅವನನ್ನು ಕಂಡರೆ ಎಂದಿಗೂ ಭಯ ಪಡುವವರಲ್ಲ. ದೇವರ ನಿಜವಾದ ಭಕ್ತನು "ದೇವರ ಹೆಸರನ್ನು ಅನವಶ್ಯಕವಾಗಿ ಉಚ್ಚರಿಸಬೇಡ" ಎಂಬ ಹೇಳುವವರನ್ನು ಕಂಡು ನಗು ತ್ತಾನೆ. "ಪ್ರೇಮದ ಮತದಲ್ಲಿ ನಾಸ್ತಿಕತೆ ಎಲ್ಲಿ ಬಂತು?" ಎಂದು ಅವನು ಕೇಳುತ್ತಾನೆ. ಯಾವ ರೀತಿಯಲ್ಲೇ ಆಗಲಿ ದೇವರ ಹೆಸರನ್ನು ಎಷ್ಟು ಹೆಚ್ಚಾಗಿ ಉಚ್ಚರಿಸಿದರೆ ಭಕ್ತನಿಗೆ ಅಷ್ಟು ಒಳ್ಳೆಯದು. ಆದುದರಿಂದ ದೇವರ ನಿಜವಾದ ಭಕ್ತನು ದೇವರ ಹೆಸರನ್ನು ಪದೇಪದೆ ಉಚ್ಚರಿಸು ತ್ತಿರುತ್ತಾನೆ. ಯಾಕೆಂದರೆ ಅವನು ದೇವರನ್ನು ಪ್ರೀತಿಸುತ್ತಾನೆ.

ನಮ್ಮ ಪ್ರೇಮ ತ್ರಿಕೋಣದ ಮೂರನೆಯ ಕೋಣವು ಪ್ರೇಮಕ್ಕೆ ಪ್ರತಿಕಕ್ಷಿಯಿಲ್ಲ ಎಂಬುದರಲ್ಲಿದೆ. ಯಾಕೆಂದರೆ ಭಕ್ತನ ಅತ್ಯುಚ್ಚವಾದ ಧ್ಯೇಯವು ಪ್ರೇಮದಲ್ಲಿ ಸಮಾವೇಶವಾಗಿದೆ. ನಮ್ಮ ಪ್ರೇಮಕ್ಕೆ ವಿಷಯ ವಾದ ವಸ್ತುವೇ ನಮ್ಮ ಉಚ್ಚ ಧ್ಯೇಯವಾಗುವವರೆಗೆ ಪ್ರೇಮವು ನಮ್ಮಲ್ಲಿ ಉಂಟಾಗುವುದೇ ಇಲ್ಲ. ಮನುಷ್ಯನ ಪ್ರೇಮವು ಅನೇಕವೇಳೆ ಅಯೋಗ್ಯಪಾತ್ರಗಳಿಗೂ, ತಪ್ಪುದಾರಿಗಳಿಗೂ ಹರಿಯಬಹುದು. ಆದರೆ ಪ್ರೀತಿಸುವವನಿಗೆ ಆ ವಸ್ತುವೇ ಅವನ ಉಚ್ಚ ಧ್ಯೇಯ. ಒಬ್ಬನು ಅತ್ಯಂತ ನೀಚನನ್ನೂ ಮತ್ತೊಬ್ಬನು ಘನನೀಯನನ್ನೂ ಪ್ರೀತಿಸಬಹುದು. ಆದರೆ ಪ್ರೇಮದ ಎಲ್ಲಾ ಸಂದರ್ಭಗಳಲ್ಲೂ ಧ್ಯೇಯವನ್ನೇ ಪ್ರೀತಿಸುವುದೇ ಹೊರತು ಬೇರೆ ಇಲ್ಲ. ಮನುಷ್ಯನ ಅತ್ಯುಚ್ಚವಾದ ಧ್ಯೇಯಕ್ಕೆ ದೇವರೆಂದು ಹೆಸರು. ಬುದ್ಧಿವಂತನಿಗೂ ದಡ್ಡನಿಗೂ, ಸನ್ಯಾಸಿಗೂ ಪಾಪಿಗೂ, ಪುರು ಷರಿಗೂ ಸ್ತ್ರೀಯರಿಗೂ ಎಲ್ಲಾ ಮನುಷ್ಯಪ್ರಾಣಿಗಳಿಗೂ ಉಚ್ಚಧ್ಯೇಯವು ದೇವರೇ. ಸೌಂದರ್ಯ, ಗಾಂಭೀರ್ಯ, ದರ್ಪ ಮುಂತಾದವುಗಳ ಒಟ್ಟು ಫಲವು ಪ್ರೇಮಕ್ಕೆ ಅರ್ಹವಾದ ಮತ್ತು ಪ್ರಿಯನಾದ ದೇವರ ಧ್ಯೇಯವನ್ನು ನಮ್ಮಲ್ಲಿ ಉಂಟುಮಾಡುತ್ತವೆ. ಆ ಧ್ಯೇಯಗಳು ಒಂದಲ್ಲ ಒಂದು ರೂಪದಲ್ಲಿ

ಎಲ್ಲಾ ಮನುಷ್ಯರ ಮನಸ್ಸುಗಳಲ್ಲೂ ಸ್ವಾಭಾವಿಕವಾಗಿ ಇದ್ದೇ ಇರುತ್ತವೆ. ಮತ್ತು ಅವೇ ಮನುಷ್ಯನ ಮನಸ್ಸಿನ ಕೆಲವು ಭಾಗವನ್ನೂ ಆವರಿಸಿರುತ್ತವೆ. ಮನುಷ್ಯನ ಜೀವನದ ಮತ್ತು ಸ್ವಭಾವದ ಎಲ್ಲಾ ಚಲನ ವಲನಗಳೂ ನಿತ್ಯಜೀವನದಲ್ಲಿ ಆ ದೇವರೆಂಬ ಧ್ಯೇಯವನ್ನು ಸಾಧಿಸುವ ಹೋರಾಟಗಳೆ ಆಗಿವೆ. ಸಮಾಜದಲ್ಲಿ ನಮ್ಮ ಸುತ್ತ ನಮ್ಮ ಕಣ್ಣಿಗೆ ಬೀಳುವವರ ಚಲನವಲನಗಳೆಲ್ಲಾ, ಬೇರೆ ಬೇರೆ ವ್ಯಕ್ತಿಗಳ ಮನಸ್ಸಿನಲ್ಲಿ ರುವ ಆ ಧ್ಯೇಯಗಳು ಕಾರ್ಯರೂಪಕ್ಕೆ ಬರುವ ಪ್ರಯತ್ನಗಳೇ ಆಗಿವೆ. ಯಾಕೆಂದರೆ ಮನಸ್ಸಿನಲ್ಲಿರುವುದು ಹೊರಕ್ಕೆ ನುಗ್ಗಿ ಬರಲು ಪ್ರಯತ್ನಿಸು ತ್ತದೆ. ಧ್ಯೇಯದ ಸರ್ವಶಕ್ತವಾದ ಈ ಬಲವೇ ಮನುಷ್ಯ ಜಾತಿಯ ಎಲ್ಲಾ ಜನರ ಮನಸ್ಸನ್ನು ಆಳತಕ್ಕ ಉದ್ದೇಶವೆಂದು ಕಾಣುತ್ತದೆ. ಬಹುಶಃ ನೂರಾರು ಜನ್ಮಗಳಲ್ಲಿ ಸಾವಿರಾರು ವರುಷಗಳು ಹೋರಾಡಿದ ಮೇಲೆ, ಮನುಷ್ಯನಿಗೆ ತನ್ನ ಒಳಗಿನ ಧ್ಯೇಯಕ್ಕೆ ಅನುಸಾರವಾಗಿ ಹೊರ ಗಿನ ಜೀವನವನ್ನೂ ಸಂದರ್ಭಗಳನ್ನೂ ಸರಿಪಡಿಸಿಕೊಳ್ಳುವುದಕ್ಕೆ ಸಾಧ್ಯ ವಿಲ್ಲವೆಂಬುದು ಅವನಿಗೆ ಗೊತ್ತಾಗಬಹುದು. ಅನಂತರ ಅವನು ತನ್ನ ಧ್ಯೇಯಗಳನ್ನು ಬಲಾತ್ಕಾರವಾಗಿ ಹೊರಗಿನ ಪ್ರಪಂಚದ ಮೇಲೆ ಹೇರಲು ಪ್ರಯತ್ನಿಸುವುದಿಲ್ಲ. ಆದರೆ ಆ ಧ್ಯೇಯವನ್ನೇ ಪ್ರೇಮದ ಅತ್ಯಂತ ಎತ್ತರವಾದ ಮಟ್ಟದಿಂದ ಪೂಜಿಸುತ್ತಾನೆ.

ಆದರ್ಶಪೂರ್ಣವಾದ ನಿರ್ದೋಷವಾದ ಧ್ಯೇಯದಲ್ಲಿ ಎಲ್ಲಾ ಕಡಿ ಮೆಯ ಆದರ್ಶಗಳೂ ಸಮಾವೇಶವಾಗಿರುತ್ತವೆ. ಪ್ರಿಯನು ಇತಿಯೊಪ್ ಎಂಬುವಳ ಭ್ರೂಭಂಗಿಯಲ್ಲಿ ಹೆಲೆನ್ ಎಂಬುವಳ ಸೌಂದರ್ಯವನ್ನು ಕಾಣುತ್ತಾನೆಂಬ ವಾಕ್ಯದ ಸತ್ಯವನ್ನು ಎಲ್ಲರೂ ಒಪ್ಪುತ್ತಾರೆ. ದೂರ ದಿಂದ ಪ್ರೇಕ್ಷಕನಾಗಿ ನಿಂತು ನೋಡುವವನಿಗೆ ಅಲ್ಲಿ ಪ್ರೇಮವು ತಪ್ಪು ದಾರಿ ಹಿಡಿದಿದೆಯೆಂಬುದು ಗೊತ್ತಾಗುತ್ತದೆ. ಆದರೆ ಪ್ರಿಯನಿಗೆ ತನ್ನ ಹೆಲನ್ ಕಾಣುತ್ತಾಳೆಯೆ ಹೊರತು ಇತಿಯೊಪ್ ಕಾಣುವುದಿಲ್ಲ. ಯಾಕೆಂದರೆ, ಪ್ರೇಮದ ವಸ್ತುವು ಹೆಲನ್ ಆಗಲಿ ಅಥವಾ ಇತಿಯೊಪ್ ಆಗಲಿ ಪ್ರಿಯನ ಆದರ್ಶವು ಕೇಂದ್ರೀಕೃತವಾಗುವ ಸ್ಥಳವೇ ಅದು.

ಪ್ರಪಂಚವು ಸಾಧಾರಣವಾಗಿ ಪ್ರೀತಿಸತಕ್ಕ ವಸ್ತುವಾವುದು? ನಿಜವಾಗಿಯೂ ಈ ಸರ್ವವ್ಯಾಪಿಯಾದ, ಪರಿಪೂರ್ಣವೂ ನಿರ್ದೋಷವೂ ಆದ, ಭಕ್ತನ ಗುರಿಯಾದ ಪ್ರೇಮಪುರುಷನನ್ನು ಅಲ್ಲ. ಪ್ರಪಂಚದಲ್ಲಿ ಸಾಧಾರಣವಾಗಿ ಸ್ತ್ರೀಯರೂ ಪುರುಷರೂ ಪೂಜಿಸುವ ಆದರ್ಶವು ತಮ್ಮಲ್ಲಿರುವ ವಸ್ತುವೇ ಆಗಿದೆ. ಪ್ರತಿಯೊಬ್ಬ ಸ್ತ್ರೀಯೂ ಪುರುಷನೂ ತನ್ನ ಆದರ್ಶವನ್ನೇ ಪ್ರಪಂಚಕ್ಕೆ ಬೆಳೆಸಿ ಅದರ ಮುಂದೆ ಅಡ್ಡಬೀಳುತ್ತಾನೆ. ಆದುದರಿಂದಲೇ ಕ್ರೂರರೂ ರಕ್ತದಾಹವುಳ್ಳವರೂ, ತಮ್ಮಂತೆಯೇ ಇರುವ ದೇವರನ್ನು ಊಹಿಸಿಕೊಳ್ಳುತ್ತಾರೆ. ಅದೇ ಅವರಿಗೆ ನೈಸರ್ಗಿಕವಾದುದು. ಯಾಕೆಂದರೆ ಅವರಿಗೆ ತಮ್ಮ ಉಚ್ಚ ಧ್ಯೇಯವನ್ನು ಮಾತ್ರ ಪೂಜಿಸಲು ಸಾಧ್ಯ. ಸಾತ್ವಿಕರಾದವರಿಗೆ ದೇವರ ವಿಷಯದಲ್ಲಿ ಮಹತ್ತಾದ ಭಾವನೆಗಳಿರುವುದಕ್ಕೂ, ಅವರ ಭಾವನೆಗಳು ಇತರರ ಭಾವನೆಗಳಿಂದ ಅಷ್ಟು ಮಟ್ಟಿಗೆ ಭಿನ್ನವಾಗಿರುವುದಕ್ಕೂ ಇದೇ ಮುಖ್ಯ ಕಾರಣ.

## ೧೮ ಪ್ರೇಮರೂಪನಾದ ಭಗವಂತನು ಸ್ವತಃಸಿದ್ಧನು

ಸ್ವಾರ್ಥವನ್ನೂ, ಪ್ರೇಮದಲ್ಲಿ ವಿನಿಮಯದ ಮಟ್ಟವನ್ನೂ ಮೀರಿ, ದೇವರ ವಿಷಯದಲ್ಲಿ ಹಿಂದಲ ಅಧ್ಯಾಯದಲ್ಲಿ ಹೇಳಿದ ರೀತಿಯಲ್ಲಿ ಭಯರಹಿತನಾಗಿರುವ ಭಕ್ತನ ವಿಷಯವನ್ನು ಕುರಿತು ಇನ್ನು ಯೋಚಿಸೋಣ. ಯಾಕೆಂದರೆ ಅಂಥವನು ಆ ದೊಡ್ಡ ದೇವರಿಗೆ ಕೂಡ "ನನ್ನದನ್ನೆಲ್ಲಾ ನಾನು ನಿನಗೆ ಕೊಟ್ಟಿದ್ದೇನೆ. ಇನ್ನು ನನ್ನದೆನ್ನುವುದು ಏನೂ ಇಲ್ಲ. ಆದರೂ ನಿನ್ನಿಂದ ನಾನು ಏನನ್ನೂ ಅಪೇಕ್ಷಿಸುವುದಿಲ್ಲ" ಎಂದು ಹೇಳುತ್ತಾನೆ. ಮನುಷ್ಯನು ಆ ಮೇಲಿನ ಮಟ್ಟವನ್ನು ಸಾಧಿಸಿದಾಗ ಅವನು ಸಂಕುಚಿತ ಸ್ವಭಾವದವನೂ ಪಕ್ಷಪಾತಿಯೂ ಆಗುವುದಿಲ್ಲ. ಅದು ಪೂರ್ಣವೂ ನಿರ್ದೋಷವೂ ಮೇರೆಯಿಲ್ಲದುದೂ ಸರ್ವವ್ಯಾಪಿಯೂ ಆದ ಪ್ರೇಮವಾಗುತ್ತದೆ. ಆ ಮಹತ್ತಾದ ಆದರ್ಶವನ್ನು ಯಾವ ಗುರುತು,

ವಿಗ್ರಹಗಳ ಸಹಾಯವೂ ಇಲ್ಲದೆ ಅವನು ಪೂಜಿಸುತ್ತಾನೆ. ಹೀಗೆ ತಾನು ಆರಿಸಿಕೊಂಡ ಸರ್ವವ್ಯಾಪಿಯಾದ ಪ್ರೇಮವೆಂಬ ಧ್ಯೇಯದ ಪೂಜೆಯೇ ಭಕ್ತಿಯ ಅತ್ಯುತ್ಕೃಷ್ಟ ಸ್ವರೂಪವು. ಇತರ ರೂಪಗಳೆಲ್ಲವೂ ಆ ಗುರಿಯನ್ನು ಸಾಧಿಸುವ ದಾರಿಯಲ್ಲಿಯ ಮೆಟ್ಟಲುಗಳು ಮಾತ್ರ. ಪ್ರೇಮದ ಧರ್ಮವನ್ನು ಅನುಸರಿಸುವುದರಲ್ಲಿ ನಮಗೆ ಉಂಟಾಗತಕ್ಕ ಎಲ್ಲಾ ಜಯಗಳೂ, ಅಪಜಯಗಳೂ ಕೂಡ ಆ ಧ್ಯೇಯಸಾಧನೆಯ ಮಾರ್ಗಕ್ಕೆ ಸೇರಿದವುಗಳೇ ಆಗಿವೆ. ಭಕ್ತನು ಒಂದಾದಮೇಲೆ ಒಂದರಂತೆ ವಸ್ತುಗಳನ್ನು ಆರಿಸಿಕೊಳ್ಳುತ್ತಾನೆ. ಅವುಗಳ ಮೇಲೆ ತನ್ನ ಧ್ಯೇಯಗಳನ್ನು ವಿಸ್ತರಿಸಿದಾಗ, ವಿಶಾಲವಾಗುತ್ತಿರುವ ತನ್ನ ಪ್ರೇಮದ ಆದರ್ಶಕ್ಕೆ ಅವು ಸಾಕಾಗುವುದಿಲ್ಲವೆಂದು ಭಕ್ತನಿಗೆ ಅನುಭವದಿಂದ ಗೊತ್ತಾಗುತ್ತದೆ. ಆಗ ಅವನು ಆ ವಸ್ತುಗಳನ್ನು ತಿರಸ್ಕರಿಸುತ್ತಾನೆ. ಕೊನೆಗೆ ಭಕ್ತನಿಗೆ ಬಾಹ್ಯವಸ್ತುಗಳ ಮೂಲಕ ತನ್ನ ಧ್ಯೇಯವನ್ನು ಸಾಧಿಸಿಕೊಳ್ಳುವುದು ಅಸಾಧ್ಯವೆಂಬುದೂ ಧ್ಯೇಯದೊಂದಿಗೆ ಹೋಲಿಸಿದರೆ ಅವು ಕೇವಲ ಅಲ್ಪವಾದವುಗಳೆಂದೂ ಅವನಿಗೆ ತಿಳಿಯಲು ಪ್ರಾರಂಭವಾಗುತ್ತದೆ. ಕೆಲವು ಕಾಲದೊಳಗೆ ಮಹತ್ತರವಾದ ಪ್ರೇಮವನ್ನೂ ಧ್ಯೇಯದ ರೂಪದಲ್ಲೇ ಅನುಭವಿಸಿ ಸಾಧಿಸಲು ಅವನಿಗೆ ಶಕ್ತಿಯುಂಟಾಗುತ್ತದೆ. ಆಗ ಅವನಿಗೆ ಪ್ರೇಮವೇ ಸತ್ಯವೂ ಸಜೀವವೂ ಆಗುತ್ತದೆ. ಆಗ ಅವನ ಪಾಲಿಗೆ ದೇವರು ಕೇವಲ ಪ್ರೇಮಮಯನಾಗಿ ಪ್ರೇಮವೇ ಆಗಿ ಇರುತ್ತಾನೆ. ಅವನನ್ನು ಎಲ್ಲಾ ಆತ್ಮಗಳ ಒಳಗೂ ಕಂಡ ಭಕ್ತನು ಆನಂದದಿಂದ ಈ ರೀತಿ ಹೇಳುತ್ತಾನೆ. “ಓ ಪ್ರಿಯನಾದ ಭಗವಂತನೆ, ಯಾರೂ ಗಂಡನನ್ನು ಅವನು ಗಂಡನೆಂದು ಪ್ರೀತಿಸುವುದಿಲ್ಲ. ಗಂಡನಲ್ಲಿರುವ ನಿನಗಾಗಿ ಪ್ರೀತಿಸುವುದು. ಓ ಪ್ರಿಯನಾದ ಭಗವಂತನೆ, ಹೆಂಡತಿಯನ್ನು ಯಾರೂ ಹೆಂಡತಿಗಾಗಿ ಪ್ರೀತಿಸುವುದಿಲ್ಲ. ಹೆಂಡತಿಯಲ್ಲಿರುವ ನಿನಗಾಗಿ ಹೆಂಡತಿಯನ್ನು ಪ್ರೀತಿಸುವುದು.”

ಮನುಷ್ಯನ ಎಲ್ಲಾ ಕೆಲಸಗಳಲ್ಲೂ ಅವನನ್ನು ಪ್ರೇರಿಸುವ ಶಕ್ತಿಯು ಸ್ವಾರ್ಥವೇ ಎಂದು ಕೆಲವರು ಹೇಳುತ್ತಾರೆ. ಅದೂ ಕೂಡ ಪ್ರೇಮವೇ. ಆದರೆ ಅದನ್ನು ಪೃಥಕ್ಕರಿಸುವುದರಿಂದ ಅದು ನೀಚವಾದುದಾಗಿದೆ.

ನಾನು ಬ್ರಹ್ಮಾಂಡದಲ್ಲಿ ಐಕ್ಯವೂ ಪೂರ್ಣವೂ ಎಂದು ನನ್ನ ಅನುಭವಕ್ಕೆ ಬಂದಾಗ ನನ್ನಲ್ಲಿ ಯಾವ ಸ್ವಾರ್ಥವೂ ಉಳಿಯುವುದಿಲ್ಲ. ಆದರೆ ನಾನು ಅಲ್ಪನೆಂದೂ ನನಗೂ ಆ ಬ್ರಹ್ಮಾಂಡಕ್ಕೂ ಯಾವ ಸಂಬಂಧವೂ ಇಲ್ಲವೆಂದು ನಾನು ತಪ್ಪಾಗಿ ಯೋಚಿಸಿದರೆ ಆಗ ನನ್ನ ಪ್ರೇಮವು ಸಂಕುಚಿತವೂ ಒಂದೇ ಸ್ಥಳಕ್ಕೆ ಅನ್ವಯಿಸುವುದೂ ಆಗುತ್ತದೆ. ಪ್ರೇಮದ ಆವರಣವನ್ನು ಹೆಚ್ಚು ಸಂಕುಚಿತ ಮಾಡುವುದರಿಂದ ಆ ತಪ್ಪು ಗಟ್ಟಿಯಾಗುತ್ತದೆ. ನಿಜವಾಗಿಯೂ ಪ್ರಪಂಚದಲ್ಲಿರುವ ವಸ್ತುಗಳೆಲ್ಲಾ ದೈವಿಕವಾದವುಗಳು. ಅವುಗಳನ್ನು ಪ್ರೀತಿಸಬೇಕು. ಪೂರ್ಣವಾದುದನ್ನು ಪ್ರೀತಿಸಿದರೆ ಭಾಗಗಳನ್ನೂ ಪ್ರೀತಿಸಿದಂತಾಗುವುದೆಂಬುದನ್ನೂ ಮನಸ್ಸಿನಲ್ಲಿ ಇಟ್ಟುಕೊಂಡಿರಬೇಕು. ಭಕ್ತಿಯ ತುದಿಯನ್ನು ಮುಟ್ಟಿದ ಯೋಗಿಗಳಿಗೆ ಈ ಪೂರ್ಣತೆಯೇ ದೇವರು. ದೇವರನ್ನು ಸ್ವರ್ಗದಲ್ಲಿರುವ ತಂದೆಯೆಂದೂ ಸೃಷ್ಟಿಸ್ಥಿತಿಲಯಗಳಿಗೆ ಕಾರಣನೆಂದೂ ಪೂಜಿಸುವುದೂ ಇತರ ವೇದಗಳೂ ಮಂತ್ರಗಳೂ ತತ್ವಗಳೂ ಅವರ ಪಾಲಿಗೆ ಅರ್ಥವಿಲ್ಲದವು. ಯಾಕೆಂದರೆ ಅವರು ತಮ್ಮ ಮಹತ್ತರವಾದ ಪ್ರೇಮದಿಂದಲೂ ಭಕ್ತಿಯಿಂದಲೂ ಅವುಗಳನ್ನು ಮೀರಿ ನಿಂತಿದ್ದಾರೆ. ಹೃದಯವು ತೊಳೆದು ಪರಿಶುದ್ಧವಾಗಿ ಪ್ರೇಮವೆಂಬ ದಿವ್ಯಾಮೃತವು ಅದರಲ್ಲಿ ತುಂಬಿರುವಾಗ ದೇವರು ಪ್ರೇಮವೆಂಬ ಭಾವ ಮಾತ್ರ ಭಕ್ತನಿಗೆ ಉಂಟಾಗುತ್ತದೆ. ಉಳಿದ ಭಾವಗಳು ಅಲ್ಪವೂ ಅಯೋಗ್ಯವೂ ಸಂಕುಚಿತವೂ ಆಗಿ ತಿರಸ್ಕೃತವಾಗುತ್ತವೆ. ಇದೀಗ ಪರಾಭಕ್ತಿಯ ಮಹಿಮೆ. ಪರಾಭಕ್ತನು ಅಲ್ಲಿಂದ ಮುಂದೆ ದೇವರನ್ನು ನೋಡಲು ದೇವಸ್ಥಾನಕ್ಕೂ 'ಚರ್ಚಿ'ಗೂ ಹೋಗುವುದಿಲ್ಲ. ಯಾಕೆಂದರೆ ಅವನು ದೇವರನ್ನು ಎಲ್ಲಾ ಕಡೆಗಳಲ್ಲೂ ಕಾಣುತ್ತಾನೆ. ಭಕ್ತನಿಗೆ ಭಗವಂತನು ದೇವಸ್ಥಾನದ ಒಳಗೂ, ಹೊರಗೂ ಕಾಣುತ್ತಾನೆ. ಯೋಗಿಯು ಯೋಗದಲ್ಲೂ ದುಷ್ಟನ ದೌಷ್ಟ್ಯದಲ್ಲೂ ಕಾಣುತ್ತಾನೆ. ಯಾಕೆಂದರೆ ಅವನು ದೇವರನ್ನು ತನ್ನ ಹೃದಯಸಿಂಹಾಸನದಲ್ಲಿ ಶಾಶ್ವತವಾಗಿ ಸ್ಥಾಪಿಸಿ ಆ ಪ್ರೇಮದ ಜ್ಯೋತಿಯು ಎಂದೆಂದಿಗೂ ಪ್ರಕಾಶಿಸುವಂತೆ ಮಾಡಿಕೊಂಡಿರುತ್ತಾನೆ.

# ೧೯ ಪ್ರೇಮಕ್ಕೆ ಅನ್ವಯಿಸಿರುವ ವ್ಯಾವಹಾರಿಕ ಪ್ರಕಾರಗಳು

ಪರಾಭಕ್ತಿಯ ಆದರ್ಶದ ಸ್ವಭಾವವನ್ನು ಮನುಷ್ಯರ ಭಾಷೆಯಲ್ಲಿ ವಿವರಿಸುವುದು ಅಸಾಧ್ಯವಾದುದು. ಅದರ ಅಪಾರವಾದ ಸೊಬಗನ್ನೂ ಪರಿಪೂರ್ಣತೆಯನ್ನೂ ಅನುಭವಿಸಿ ತಿಳಿಯಲು ಮನುಷ್ಯರ ಮಹತ್ತರವಾದ ಊಹನಾಶಕ್ತಿಗೂ ಅಸಾಧ್ಯವಾದುದು. ಆದಾಗ್ಯೂ ಆ ಪ್ರೇಮಧರ್ಮದ ಅನುಯಾಯಿಗಳು ಪ್ರಪಂಚದ ಎಲ್ಲಾ ಭಾಗಗಳಲ್ಲೂ ಪ್ರೇಮದ ಉಚ್ಚ ಮತ್ತು ನೀಚ ಆದರ್ಶಗಳನ್ನು ಗುರುತಿಸಿ ತಿಳಿಯಲು ಮನುಷ್ಯರ ಭಾಷೆಯನ್ನೇ ಉಪಯೋಗಿಸಿದವರಾಗಿದ್ದಾರೆ. ಅಷ್ಟೆ ಅಲ್ಲ. ಅನೇಕ ಪ್ರಕಾರದ ಮನುಷ್ಯನ ಪ್ರೇಮವೇ ವರ್ಣನಾತೀತವಾದ ದೈವಿಕವಾದ ಪ್ರೇಮದ ಪ್ರತಿರೂಪವಾದಂತಾಗಿದೆ. ಮನುಷ್ಯನು ದೈವಿಕವಿಚಾರಗಳನ್ನು ಕುರಿತು ತನ್ನ ದಾರಿಯಲ್ಲಿ ಮಾತ್ರವೇ ಯೋಚಿಸಬಲ್ಲನು; ಅವ್ಯಕ್ತವಾದುದನ್ನು ವ್ಯಕ್ತವಾದುದರಿಂದ ಮಾತ್ರ ವಿವರಿಸಬಲ್ಲನು. ನಮಗೆ ಬ್ರಹ್ಮಾಂಡವು ಸಾಕಾರದ ಭಾಷೆಯಲ್ಲಿ ಬರೆದಿರುವ ನಿರಾಕಾರ. ಆದುದರಿಂದ ಭಕ್ತರು ದೇವರನ್ನೂ ಪೂಜೆಯನ್ನೂ ಕುರಿತು ಹೇಳುವಾಗ ಮನುಷ್ಯ ಪ್ರೇಮದ ಸಾಮಾನ್ಯವಾದ ಮಾತುಗಳನ್ನೇ ಉಪಯೋಗಿಸಿಕೊಳ್ಳುವರು. ಪರಾಭಕ್ತಿಯ ವಿಷಯದಲ್ಲಿ ಬರೆದ ಕೆಲವು ಶ್ರೇಷ್ಠಲೇಖಕರು ಪರಾಭಕ್ತಿಯನ್ನು ಈ ಮುಂದೆ ಕಂಡಂತೆ ವಿವರಿಸಿದ್ದಾರೆ. ದೇವರಲ್ಲಿ ಪ್ರೇಮವನ್ನು ತೋರಿಸುವ ಅತ್ಯಂತ ಕೀಳುದರ್ಜೆಯ ಪ್ರೇಮವು ಶಾಂತ ಸ್ವಭಾವದ ಪ್ರೇಮ. ಭಕ್ತನು ಪ್ರೇಮದ ಕಾವು ಇಲ್ಲದೆ, ವಿಗ್ರಹ ವ್ರತ ನಿಯಮಾದಿಗಳಿಗಿಂತ ಸ್ವಲ್ಪ ಉತ್ತಮವಾದ ಸಾಧಾರಣವಾದ ಪ್ರೇಮದಿಂದ ದೇವರನ್ನು ಪೂಜಿಸುವುದು. ಹುಚ್ಚು ಪ್ರೇಮದ ಪ್ರವಾಹವಿಲ್ಲದಿರುವುದು. ಇದಕ್ಕೆ ಶಾಂತಾ ಎಂದು ಹೆಸರು. ಪ್ರಪಂಚದಲ್ಲಿ ಕೆಲವರು ನಿಧಾನವಾಗಿ ನಡೆಯುವುದನ್ನೂ ಉಳಿದ ಕೆಲವರು ಬಿರುಗಾಳಿಯಂತೆ ಹೋಗುವುದನ್ನೂ ನಾವು ನೋಡಿದ್ದೇವೆ. ಶಾಂತ ಭಕ್ತನು ಮೊದಲನೆಯ ಗುಂಪಿಗೆ

ಸೇರಿದವನು. ಮುಂದಲ ಮೇಲಿನ ತರಗತಿಯ ಪ್ರೇಮವು ದಾಸ್ಯಪ್ರೇಮ. ಮನುಷ್ಯನು, ತಾನು ದೇವರಲ್ಲಿ ಅವನ ದಾಸನಾಗಿ ಅತ್ಯಂತ ಶ್ರದ್ಧೆಯಿಂದ ಅವನನ್ನು ಸೇವಿಸುವುದೇ ದಾರಿಯೆಂದು ಭಕ್ತನಿಗೆ ತೋರಿದಾಗ ಅವನಿಗೆ ದಾಸ್ಯಪ್ರೇಮವೇ ಆದರ್ಶವಾಗುತ್ತದೆ.

ಮುಂದಲ ಪ್ರೇಮದ ಪ್ರಕಾರವು ಸಖ್ಯ ಅಥವ ಸ್ನೇಹ ಎಂಬುದು. ಪ್ರೇಮದ ಈ ಆದರ್ಶವನ್ನು ಅವಲಂಬಿಸುವ ಭಕ್ತನು ದೇವರಿಗೆ "ನೀನೆ ನಮ್ಮ ಬಂಧು. ನೀನೆ ನಮ್ಮ ಪ್ರೀತಿಯ ಮಿತ್ರ"* ಎಂಬುದಾಗಿ ಹೇಳುತ್ತಾನೆ. ತನ್ನ ಮಿತ್ರನು ತನ್ನನ್ನು ಎಂದಿಗೂ ದಂಡಿಸುವುದಿಲ್ಲವೆಂದೂ ತನಗೆ ಸಹಾಯ ಮಾಡುವುದಕ್ಕೇ ಪ್ರಯತ್ನಿಸುವನೆಂದೂ ಅವನಿಗೆ ತಿಳಿದಿರುವುದರಿಂದ ಅವನು ದೇವರ ಎದುರಿಗೆ ತನ್ನ ಹೃದಯವನ್ನು ಬಿಚ್ಚುತ್ತಾನೆ. ದೇವರಿಗೂ ಭಕ್ತನಿಗೂ ಇರುವ ಈ ಸಖ್ಯ ಸಂಬಂಧದಲ್ಲಿ ಮನುಷ್ಯನಿಗೂ ಅವನ ಸ್ನೇಹಿತನಿಗೂ ಇರುವ ಸಮಾನಸ್ಕಂಧತೆ ಮತ್ತು ಪರಸ್ಪರ ಅನುರಾಗವೇ ಇರುತ್ತದೆ. ಈ ಬಗೆಯ ಭಕ್ತಿಯು ಭಕ್ತನ ಆದರ್ಶವಾದಾಗ ಅವನ ಹೃದಯದಿಂದ ಭಗವಂತನ ಸನ್ನಿಧಿಗೆ ಪ್ರೇಮವು ಹೀಗೆ ಪ್ರವಹಿಸುತ್ತದೆ. ಹೀಗೆ ಈ ಸಖ್ಯಪ್ರೇಮವು ಸ್ಥಾಪನೆಯಾಗುವುದರಿಂದ ಭಗವಂತನು ನಮ್ಮ ಸಮೀಪದಲ್ಲಿರುವ ಮಿತ್ರನೇ ಆಗುತ್ತಾನೆ. ಅವನಿಗೆ ನಾವು ನಮ್ಮ ಹೃದಯದೊಳಗಿನ ಎಲ್ಲಾ ರಹಸ್ಯವಾದ ಯೋಚನೆಗಳನ್ನೂ ಭಯವಿಲ್ಲದೆ ಧೈರ್ಯದಿಂದ ಹೇಳಿಕೊಳ್ಳಬಹುದು. ಭಗವಂತನು, ಈ ಜೀವನವೆಂಬ ಆಟದಲ್ಲಿ ಒಡನಾಡಿಯಾದ ಅತ್ಯಂತ ಪ್ರಿಯನಾದ ಸಮಾನನಾದ ಮಿತ್ರನಾಗುತ್ತಾನೆ.

ನಾವುಗಳೆಲ್ಲಾ ಈ ವಿಶ್ವದಲ್ಲಿ ಭಗವಂತನೊಂದಿಗೆ ಆಡುತ್ತ ಇದ್ದೇವೆಂದು ಬೇಕಾದರೆ ಹೇಳಬಹುದು. ಯಾಕೆಂದರೆ ಮಕ್ಕಳು ತಮ್ಮ ಆಟವನ್ನೂ ಹಿರಿಯರು ತಮ್ಮ ಆಟವನ್ನೂ ಆಡುವಂತೆ ಭಗವಂತನು ತನ್ನ ಆಟವನ್ನು ಆಡುತ್ತಾನೆ. ಆ ಆಟಕ್ಕಾಗಿಯೇ ಜಗತ್ತನ್ನು ಸೃಷ್ಟಿಸುತ್ತಾನೆ. ಅವನು ಜಗತ್ತನ್ನು ಸೃಷ್ಟಿಸುವುದಕ್ಕೆ ಬೇರೆ ಉದ್ದೇಶಗಳನ್ನು ಹೇಳಲು

---

* ತ್ವಮೇವ ಬಂಧುಶ್ಚ ಸಖಾತ್ವಮೇವ (ಪಾಂಡವ ಗೀತಾ)

ಸಾಧ್ಯವಿಲ್ಲ. ಯಾಕೆಂದರೆ ಅವನು ಪೂರ್ಣನಾಗಿದ್ದಾನೆ. ಅವನಿಗೆ ಬೇಕಾದುದು ಯಾವುದೂ ಇಲ್ಲ. ಅವನು ಯಾತಕ್ಕೆ ಸೃಷ್ಟಿ ಮಾಡುತ್ತಾನೆ? ನಾವು ಕಾರ್ಯೋನ್ಮುಖರಾಗುವುದು ಕೆಲವು ಆಸೆಗಳನ್ನು ಪೂರೈಸಿಕೊಳ್ಳುವುದಕ್ಕಾಗಿ. ಆಸೆಯಿರುವ ಕಡೆ ಅಪೂರ್ಣತೆಯಿದೆ ಎಂಬುದು ಸಿದ್ಧ. ದೇವರು ಪೂರ್ಣನಾಗಿ ಅವನಿಗೆ ಯಾವ ಆಸೆಯೂ ಇಲ್ಲದ ಮೇಲೆ ಅವನು ಯಾವಾಗಲೂ ಕಾರ್ಯದಲ್ಲೇ ನಿರತನಾಗಿ ಯಾಕೆ ಈ ಸೃಷ್ಟಿಯನ್ನು ಮಾಡುತ್ತಾ ಇರಬೇಕು? ಇದರಲ್ಲಿ ಅವನ ಉದ್ದೇಶವೇನು? ದೇವರು ಈ ವಿಶ್ವವನ್ನು ಯಾವುದೋ ಉದ್ದೇಶಕ್ಕಾಗಿ ಸೃಷ್ಟಿಮಾಡಿರುವನೆಂದು ನಾವು ಕೇಳುವ ಕಥೆಗಳು ಬಹಳ ಸೊಗಸಾದ ಕಥೆಗಳೆ. ಆದರೆ ಅವು ಬರಿಯ ಕಥೆಗಳೇ ಹೊರತು ಮತ್ತೆ ಬೇರೆ ಅಲ್ಲ. ಆದುದರಿಂದ ಪ್ರಪಂಚವು ಭಗವಂತನ ಆಟಕ್ಕಲ್ಲದೆ ಮತ್ತಾವುದಕ್ಕೂ ಸೃಷ್ಟಿಯಾಗಿಲ್ಲ. ಆ ಸೃಷ್ಟಿಯು ಮುಂದುವರಿಯುತ್ತಿರುವುದೂ ಅದೇ ಉದ್ದೇಶಕ್ಕಾಗಿ. ಹೌದು. ವಿಶ್ವವೆಲ್ಲಾ ಅವನಿಗೆ ಹಿತವಾದ ವಿನೋದವೇ ಆಗಿರಬೇಕು. ಆದುದರಿಂದಲೇ ಭಕ್ತನು ದೇವರು ನಿನ್ನ ಆಟದ ಒಡನಾಡಿಯೆಂದು ತಿಳಿ. ಬಂದುದೆಲ್ಲವೂ ಆತನ ಆಟವೆಂದು ಸಂತೋಷದಿಂದ ಅನುಭವಿಸು. ನೀನು ದರಿದ್ರನಾಗಿದ್ದರೆ ಅದೂ ವಿನೋದವೆಂದು ಅನುಭವಿಸು. ನೀನು ಧನಿಕನಾಗಿದ್ದರೆ ಆ ವಿನೋದವನ್ನೂ ಅನುಭವಿಸು. ಅಪಾಯವು ಬಂದರೆ ಒಳ್ಳೆ ವಿನೋದವೆಂದು ಅನುಭವಿಸು. ಸುಖವು ಬಂದರೆ ಇನ್ನೂ ಹೆಚ್ಚು ವಿನೋದವೆಂದು ಅನುಭವಿಸು. ಪ್ರಪಂಚವೇ ಆಟದ ಬೈಲೆಂದೂ ನಾವು ಇಲ್ಲಿ ಇರುವಷ್ಟು ಕಾಲವೂ ನಮ್ಮೊಂದಿಗೆ ದೇವರು ಆಡುತ್ತಿರುವನೆಂದೂ ಭಾವಿಸು. ಆ ನಿನ್ನ ಒಡನಾಡಿ ಭಗವಂತನು ಎಷ್ಟು ಚೆನ್ನಾಗಿ ಆಡುತ್ತಿರುವನೆಂಬುದನ್ನೂ ನೋಡು. ಆಟವು ಮುಗಿದನಂತರ ಸರದಿಯಂತೆ ಕೊನೆಯಾಗುವುದು. ಅನಂತರ ಸ್ವಲ್ಪಕಾಲ ವಿಶ್ರಾಂತಿ. ಆ ಮೇಲೆ ಮತ್ತೆ ಆಟವು ಪ್ರಾರಂಭವಾಗುವುದು. ವಿಶ್ವವೂ ಅದರಲ್ಲಿರುವ ಎಲ್ಲಾ ವಸ್ತುಗಳೂ ಹೊಸದಾಗಿ ಸೃಷ್ಟಿಯಾಗಿ ಅವನೊಂದಿಗೆ ಆಡಲು ಪ್ರಾರಂಭವಾಗುವುದು. ಹೀಗೆಯೆ ಅದರ ಕ್ರಮ. ಸೃಷ್ಟಿಯೆಲ್ಲವೂ ಆಟ. ನೀವೂ ಭಗವಂತನ ಈ ಆಟದಲ್ಲಿ

ಸಹಾಯಕರಾಗಿರುವಿರಿ ಎಂಬುದನ್ನು ನೀವು ಮರೆತಾಗ ಮಾತ್ರ ನಿಮಗೆ ದುಃಖವೂ ಕಷ್ಟವೂ ಉಂಟಾಗಿ ಪ್ರಪಂಚವು ಭಾರವಾಗಿ ಅತ್ಯಂತ ಶಕ್ತಿಯಿಂದ ನಿಮ್ಮನ್ನು ಅದುಮಿ ತುಳಿಯುತ್ತದೆ. ಆದರೆ ಯಾವಾಗ ನೀವು ಈ ಮೂರು ನಿಮಿಷಗಳ ನಶ್ವರ ಪ್ರಪಂಚವು ನಿಶ್ಚಯವೆಂಬ ಭಾವನನ್ನು ಬಿಟ್ಟು ಆಟದಲ್ಲಿ ದೇವರಿಗೆ ಸಹಾಯಕರಾಗಿರುವೆವು ಎಂದು ಯೋಚಿಸಿಕೊಳ್ಳುವಿರೊ ಆ ಕ್ಷಣ ನಿಮ್ಮ ಪಾಲಿಗೆ ದುಃಖವು ಕೊನೆಯಾಗುವುದು. ಆದುದರಿಂದ ಭಗವಂತನು ಅಣುಗಳಿಂದ ಭೂಮಿಯನ್ನೂ ಸೂರ್ಯಚಂದ್ರರನ್ನೂ ಸೃಷ್ಟಿಮಾಡುವ ಮತ್ತು ಪ್ರಾಣಿಗಳೊಂದಿಗೂ, ಸಸ್ಯಾದಿಗಳೊಂದಿಗೂ ಮನುಷ್ಯನ ಹೃದಯಗಳೊಂದಿಗೆ ಆಡುವ ಆಟವನ್ನು ನೋಡಿ. ನಾವು ಭಗವಂತನ ಆಟದ ಚೆದುರಂಗದ ಕಾಯಿಗಳೆಂದೂ ಅವನು ನಮ್ಮನ್ನು ಒಂದು ಸಲ ಒಂದು ತರನಾಗಿಯೂ ಮತ್ತೊಂದು ಸಲ ಮತ್ತೊಂದು ತರನಾಗಿಯೂ ಇಡುತ್ತಿರುವನೆಂದೂ ನಾವು ಉದ್ದೇಶಪೂರ್ವಕವಾಗಿಯೋ ಅಥವಾ ಉದ್ದೇಶವಿಲ್ಲದೆಯೋ ಅವನ ಆಟದಲ್ಲಿ ಅವನಿಗೆ ಸಹಾಯ ಮಾಡುತ್ತಿರುವೆವೆಂದೂ ಊಹಿಸಿ. ಅಬ್ಬ, ನಾವು ಅವನ ಒಡನಾಡಿಗಳೆಂದು ಯೋಚಿಸುವುದರ ಆನಂದವೆಷ್ಟು!

ಪ್ರೇಮದ ಮುಂದಿನ ಪ್ರಕಾರವು ವಾತ್ಸಲ್ಯ. ದೇವರನ್ನು ನಮ್ಮ ತಾಯಿತಂದೆಯಂತೆ ಅಲ್ಲ, ಮಗುವೆಂದು ಪ್ರೀತಿಸುವುದು. ಇದು ವಿಚಿತ್ರವಾಗಿ ಕಾಣಬಹುದು. ಆದರೂ ದೇವರು ಎಂಬ ಭಾವನೆಯಲ್ಲಿ ಸೇರಿರುವ ಶಕ್ತಿದರ್ಪಗಳನ್ನೆಲ್ಲಾ ಹೋಗಲಾಡಿಸಲು ಈ ಭಾವವು ಸಹಾಯಕವಾಗುವುದು. ದರ್ಪಶಕ್ತಿ ಇದ್ದಕಡೆ ನಮಗೆ ಭಯವುಂಟಾಗುತ್ತದೆ. ಆದರೆ ದೇವರಲ್ಲಿ ನಮಗೆ ಭಯವಿರದೇ ಇರಬೇಕೆಂಬುದೇ ಭಕ್ತಿಯ ಆದರ್ಶ. ಭಕ್ತನ ನಡತೆಯು ರೂಪುಗೊಳ್ಳಲು ಪ್ರಾರಂಭದಲ್ಲಿ ಭಕ್ತಿ ವಿನಯ ಇವು ಆವಶ್ಯಕವಾದವುಗಳು. ಅದು ರೂಪುಗೊಂಡು ಭಕ್ತನು ಶಾಂತವಾದ ಪ್ರೇಮವನ್ನೂ ಪ್ರೇಮದ ಹುಚ್ಚುಕಾವನ್ನೂ ಸ್ವಲ್ಪ ಮಟ್ಟಿಗೆ ಅನುಭವಿಸಿದನಂತರ ಅವನು ಬಾಹ್ಯನಿಯಮಗಳಿಗೆ ಪ್ರಾಶಸ್ತ್ಯವನ್ನು ಕೊಡಬೇಕಾಗುವುದಿಲ್ಲ. ದೇವರು ಸರ್ವಶಕ್ತನೆಂದೂ ಅಖಿಲ

ಬ್ರಹ್ಮಾಂಡನಾಯಕನೆಂದೂ ದೇವರುಗಳಿಗೆಲ್ಲಾ ದೇವರೆಂದೂ ಯೋಚಿಸಲು ಅವನಿಗೆ ಬೇಕಿಲ್ಲ. ದೇವರು ಈ ಬಗೆಯ ಭಯಂಕರ ವ್ಯಕ್ತಿ ಎಂಬ ಭಾವವನ್ನು ಬಿಡುವುದಕ್ಕಾಗಿಯೇ ಭಕ್ತನು ದೇವರನ್ನು ತನ್ನ ಮಗುವೆಂದು ಪೂಜಿಸಲು ಪ್ರಾರಂಭಿಸುವುದು. ತಾಯಿತಂದೆಗಳು ತಮ್ಮ ಮಗುವನ್ನು ನೋಡಿ ಬೆದರುವುದಿಲ್ಲ. ಅದರಲ್ಲಿ ಅವರಿಗೆ ಭಕ್ತಿಯಿರುವುದೆಂದೂ ಹೇಳುವುದಕ್ಕಾಗುವುದಿಲ್ಲ. ಮಗುವಿನಿಂದ ಯಾವ ಸಹಾಯವನ್ನೂ ಕೇಳುವಂತೆಯೂ ಇಲ್ಲ. ಮಗುವಿನ ವಿಷಯದಲ್ಲಿ ಅವರ ಸ್ಥಿತಿಯು ಯಾವಾಗಲೂ ಕೊಡತಕ್ಕದುದಾಗಿರುವುದೇ ಹೊರತು ಸ್ವೀಕರಿಸುವುದಾಗಿರುವುದಿಲ್ಲ. ಆ ಮಗುವಿನಲ್ಲಿರುವ ಪ್ರೇಮದಿಂದ ಅವರು ಅದಕ್ಕಾಗಿ ತಮ್ಮ ಜೀವವನ್ನು ನೂರಾರು ಸಲ ಕೊಡುವುದಕ್ಕೂ ಸಿದ್ಧವಾಗಿರುತ್ತಾರೆ. ಅವರು ಮಗುವಿಗಾಗಿ ಸಾವಿರ ಜೀವಗಳನ್ನು ಬೇಕಾದರೂ ಬಲಿಕೊಡಲು ಸಿದ್ಧರಾಗಿರುತ್ತಾರೆ. ಭಕ್ತನು ದೇವರನ್ನು ಅದೇ ವಿಧವಾದ ತೀವ್ರತೆಯಿಂದ ಪ್ರೀತಿಸಲು ಇಷ್ಟಪಡುತ್ತಾನೆ. ಆದುದರಿಂದಲೇ ಅವನು ದೇವರನ್ನು ಮಗುವಿನಂತೆ ಪ್ರೀತಿಸಿ ಪೂಜಿಸುವುದು. ಹೀಗೆ ದೇವರನ್ನು ಮಗುವಾಗಿ ಪ್ರೀತಿಸುವ ಭಾವನೆಯು, ದೇವರ ಅವತಾರಗಳಲ್ಲಿ ನಂಬಿಕೆಯಿರುವ ಮತಗಳವರಲ್ಲಿ ಸ್ವಾಭಾವಿಕವಾಗಿ ಬೆಳೆಯಿತು. ಮುಸಲ್ಮಾನರಿಗೆ ದೇವರನ್ನು ಆ ರೀತಿಯಲ್ಲಿ ಪ್ರೀತಿಸುವ ಸೂಚನೆಯೇ ಘಾಬರಿಯನ್ನುಂಟುಮಾಡುವುದು. ಆದರೆ ಹಿಂದೂಗಳೂ ಕ್ರಿಸ್ತರೂ ಆ ಭಾವನೆಯನ್ನು ಸಾಧ್ಯವನ್ನಾಗಿ ಮಾಡಿಕೊಳ್ಳಬಲ್ಲರು. ಯಾಕೆಂದರೆ ಅವರಿಗೆ ಮಗುವಾದ ಜೀಸಸ್, ಮಗುವಾದ ಕೃಷ್ಣ ಇವರ ಅನುಭವವಿದೆ. ಕ್ರಿಸ್ತಮಾತೆಯರೂ ಕೂಡ ತಾವೂ ಏಸುಕ್ರಿಸ್ತನ ತಾಯಿಯರೇ ಎಂಬ ಭಾವನೆಯನ್ನು ಬೆಳಸಿಕೊಳ್ಳಬಹುದು. ಹೀಗೆ ಮಾಡಿದರೆ ಪಾಶ್ಚಾತ್ಯರಿಗೆ ಬಹಳ ಅವಶ್ಯಕವಾಗಿರುವ ಮಾತೃತ್ವದ ದೇವತ್ವ ಜ್ಞಾನವು ಉಂಟಾಗುವುದು. ಹೇಗಾದರೂ ದೇವರೆಂದರೆ ಭಯಭಕ್ತಿ ಮುಂತಾದ ಮೂಢ ನಂಬಿಕೆಗಳು ಹೇಗಾದರೂ ನಮ್ಮಲ್ಲಿ ಆಳವಾಗಿ ನೆಲಸಿ ಮನೆಮಾಡಿಕೊಂಡಿವೆ. ಈ ಪ್ರೇಮದ ಆದರ್ಶದಲ್ಲಿ ಅವುಗಳನ್ನೆಲ್ಲಾ ಮುಳುಗಿಸಬೇಕಾದರೂ ಭಕ್ತನಿಗೆ ಬಹಳ ಕಾಲ ಹಿಡಿಯುವುದು.

ಪ್ರೇಮದ ದೇವೀ ಆದರ್ಶವನ್ನು ಮನುಷ್ಯ ಜೀವನದಲ್ಲಿ ಪ್ರಕಟಿಸ ತಕ್ಕ ಇನ್ನೂ ಒಂದು ಪ್ರಕಾರವಿದೆ. ಅದಕ್ಕೆ "ಮಧುರ" ಎಂದು ಹೆಸರು. ಪ್ರೇಮದ ಪ್ರಕಾರಗಳಲ್ಲೆಲ್ಲಾ ಅದೇ ಅತ್ಯುತ್ತಮವಾದುದು. ಅದು ಮನುಷ್ಯನಿಗೆ ತಿಳಿದಿರುವ, ಅತ್ಯಂತ ತೀವ್ರವಾದ ಮತ್ತು ಉದಾತ್ತ ವಾದ ಪ್ರೇಮಭಾವನೆಯ ಮೇಲೆಯೆ ಅವಲಂಬಿಸಿದೆ. ಮನುಷ್ಯನ ಸ್ವಭಾವವನ್ನು ಪೂರ್ಣವಾಗಿ ಅಲುಗಿಸಿ ಅವನ ದೇಹದ ಪ್ರತಿಯೊಂದು ರಕ್ತಕಣದಲ್ಲೂ ಚಲಿಸಿ ಅವನನ್ನು ಹುಚ್ಚನನ್ನಾಗಿ ಮಾಡುವುದು ಮತ್ತಾವ ಪ್ರೇಮ? ಅವನು ತನ್ನ ಸ್ವಭಾವವನ್ನು ಪೂರ್ಣವಾಗಿ ಬದ ಲಾಯಿಸಿ ದೇವತೆಯೋ ಅಥವಾ ರಾಕ್ಷಸನೋ ಆಗುವಂತೆ ಮಾಡುವುದು ಯಾವುದು? ಅದು ಸ್ತ್ರೀಯರಿಗೂ ಪುರುಷರಿಗೂ ಇರುವ ಪ್ರೇಮವೇ ಹೊರತು ಮತ್ತೇನೂ ಅಲ್ಲ. ಪ್ರೇಮದ ಈ "ಮಧುರ" ಸಂಬಂಧದಲ್ಲಿ ಭಕ್ತನು ದೇವರನ್ನು ಪತಿ ಎಂದು ತಿಳಿದು ಪೂಜಿಸುತ್ತಾನೆ. ಈ ಆದರ್ಶ ವನ್ನು ಅನುಸರಿಸುವ ಭಕ್ತನು ಪುರುಷ ಎನ್ನಿಸಿಕೊಳ್ಳಲು ಅರ್ಹನಾದ ವನು ಈ ಜಗತ್ತಿನಲ್ಲಿ ದೇವರಲ್ಲದೆ ಮತ್ತಾರೂ ಅಲ್ಲವೆಂದೂ ಉಳಿದವ ರೆಲ್ಲಾ ಆ ದೃಷ್ಟಿಯಿಂದ ನೋಡಿದಾಗ ಸ್ತ್ರೀಯರೇ ಎಂದು ಭಾವಿಸುತ್ತಾನೆ. ಆದುದರಿಂದ ಪುರುಷನು ಸ್ತ್ರೀಯರಲ್ಲೂ ಸ್ತ್ರೀಯು ಪುರುಷನಲ್ಲೂ ಇಡುವ ಪೂರ್ಣವಾದ ಪ್ರೇಮವನ್ನು ಭಗವಂತ ನಿಗೇ ಅರ್ಪಿಸಬೇಕಾಗಿದೆ. ಪ್ರಪಂಚದಲ್ಲಿ ನಾವು ನೋಡುತ್ತಿರುವ ಮತ್ತು ಆಡುತ್ತಿರುವ ಬಗೆಬಗೆಯ ಪ್ರಕಾರದ ಎಲ್ಲಾ ಪ್ರೇಮ ಗಳಿಗೂ ನಿಶ್ಚಯವಾಗಿಯೂ ಭಗವಂತನೇ ಗುರಿ. ಆದರೆ ಈ ಪ್ರೇಮನದಿಗಳೆಲ್ಲಾ ಹರಿದು ಹೋಗಿ ಸೇರುವುದು ಭಗವಂತನೆಂಬ ಸಮುದ್ರಕ್ಕೇ ಎಂಬುದು ದುರದೃಷ್ಟದಿಂದ ಮನುಷ್ಯನಿಗೆ ತಿಳಿದಿಲ್ಲ. ಆದುದರಿಂದ ಅವನು ತನ್ನ ಪ್ರೇಮವನ್ನು ಮನುಷ್ಯರೆಂಬ ಬೊಂಬೆಗಳ ಕಡೆಗೆ ಅವಿವೇಕದಿಂದ ತಿರುಗಿಸುತ್ತಾನೆ. ಮನುಷ್ಯನ ಸ್ವಭಾವ ಮಗು ವನ್ನು ಪ್ರೀತಿಸುವಷ್ಟು ಉತ್ಕಟವಾಗಿ ಮಗುವಿನ ಬೊಂಬೆಯನ್ನು ಪ್ರೀತಿಸುವುದಿಲ್ಲ. ಪ್ರೇಮವನ್ನು ವಿವೇಕವಿಲ್ಲದೆ ಮಗುವಿಗೇ ಪೂರ್ಣವಾಗಿ

ಧಾರೆಯೆರೆದರೂ ಅದರ ಫಲವು ನಿಮಗೆ ದುಃಖವನ್ನುಂಟುಮಾಡುವುದೇ ಆಗುತ್ತದೆ. ಆದರೆ ಆ ದುಃಖದಿಂದಲೇ. ನಿಮ್ಮ ಪ್ರೇಮವನ್ನೆಲ್ಲಾ ಯಾವುದಾದರೂ ಮನುಷ್ಯ ಪ್ರಾಣಿಗೆ ಸಲ್ಲಿಸಿದರೆ ಅದರ ಫಲವು ದುಃಖ ದಾಯಕವಾಗುವುದೆಂಬ ಜ್ಞಾನವು ನಿಮಗೆ ಉಂಟಾಗುವುದು. ನಮ್ಮ ಪ್ರೇಮವನ್ನು ಎಲ್ಲರಿಗಿಂತಲೂ ಶ್ರೇಷ್ಠನಾದವನಿಗೆ ಕೊಡಬೇಕು. ನಾಶವೂ, ಬದಲಾವಣೆಯೂ, ಎರಿಳಿತಗಳೂ ಇಲ್ಲದ ಪ್ರೇಮಸಮುದ್ರನಾಗಿ ಭಗ ವಂತನಿಗೆ ಕೊಡಬೇಕು. ಸರಿಯಾದ ನೆಲೆಯನ್ನು ಸೇರಬೇಕಾದರೆ ನಮ್ಮ ಪ್ರೇಮವು ಭಗವಂತನಿಗೇ ಹೋಗಬೇಕು. ಅವನೇ ಪ್ರೇಮದ ಅಪಾರ ಸಾಗರನು. ಒಂದು ಪರ್ವತದ ಪಾರ್ಶ್ವದಿಂದ ಹನಿಹನಿಯಾಗಿ ಕೆಳಕ್ಕೆ ಉದುರುತ್ತಿರುವ ನೀರು ಹನಿಗಳು ನದಿಗೆ ಬಿದ್ದರೂ ಅಲ್ಲೇ ನಿಲ್ಲದೆ ಹೇಗೆ ಸಮುದ್ರವನ್ನೇ ಸೇರಬೇಕೋ ಹಾಗೆಯೇ ನಮ್ಮ ಎಲ್ಲಾ ರಾಗಗಳೂ ಭಾವಗಳೂ ಕೊನೆಯಲ್ಲಿ ದೇವರಿಗೆ ಗುರಿಯಿಡಬೇಕು. ಆದುದರಿಂದ ನಿಮ್ಮ ಎಲ್ಲಾ ಭಾವಗಳನ್ನೂ ದೇವರ ಕಡೆಗೇ ತಿರುಗಿಸಿ. ನಿಮ್ಮ ಪ್ರೇಮವು ಯಾವ ಬಗೆಯದುದಾದರೂ ಚಿಂತೆಯಿಲ್ಲ. ಆ ಭಗವಂತನು ನಿಮ್ಮ ಹೃದಯದ ಆಸೆಗಳನ್ನೆಲ್ಲಾ ಪೂರೈಸುತ್ತಾನೆ. ನಿಮಗೆ, ಕೋಪ ಗೊಳ್ಳಬೇಕೆಂದು ಇಷ್ಟವಾದರೆ ಭಗವಂತನಲ್ಲೇ ಕೋಪಿಸಿಕೊಂಡು ಅವ ನನ್ನೇ ಗದರಿಸಿಕೊಳ್ಳಿ. ಅಷ್ಟು ನೆಮ್ಮದಿಯಿಂದ ನೀವು ಮತ್ತಾರನ್ನು ತಾನೇ ಗದರಿಸಲು ಸಾಧ್ಯ? ಯಾಕೆಂದರೆ ಮನುಷ್ಯನು ಬಹುಕಾಲ ನಿಮ್ಮ ಬೈಗಳನನ್ನು ಶಾಂತಿಯಿಂದ ಕೇಳುವುದಿಲ್ಲ. ಸಾವಕಾಶವಾಗಿಯೂ ಜಾಗ್ರತಿಯಾಗಿಯೂ ಅವನು ನಿಮಗೆ ಪ್ರತೀಕಾರವನ್ನು ಮಾಡಿಯೇ ಮಾಡುತ್ತಾನೆ. ಉದಾಹರಣೆಗೆ ನೀವು ನನ್ನೊಂದಿಗೆ ಕೋಪಿಸಿಕೊಂಡರೆ ನಾನು ಬೇಗವೋ ಸಾವಕಾಶವಾಗಿಯೋ ನಿಮ್ಮ ಮೇಲೆ ಕೋಪಿಸಿ ಕೊಳ್ಳುವುದು ಖಂಡಿತ. ಯಾಕೆಂದರೆ ನನ್ನ ಸಹನೆಗೆ ಒಂದು ನೆಲೆ ಯುಂಟು. ಅದರ ಆಚೆಗೆ ನಿಮ್ಮ ಕೋಪವನ್ನು ನಾನು ತಡೆಯಲಾರೆ. ಆದುದರಿಂದ ಭಗವಂತನನ್ನೇ "ನೀನು ಯಾಕೆ ನನ್ನ ಬಳಿಗೆ ಬರುವುದಿಲ್ಲ. ನನ್ನನ್ನು ಯಾಕೆ ಹೀಗೆ ಒಂಟಿಯಾಗಿ ಬಿಟ್ಟಿದ್ದೀಯೆ?'' ಎಂದು ಗದ್ದರಿಸಿ. ಭಗವಂತನಲ್ಲಿ ಹೊರತು ಮತ್ತೆಲ್ಲಿ ತಾನೆ ಸುಖವುಂಟು! ಬರಿ ಸಣ್ಣ

ಮಣ್ಣು ಹೆಂಟೆಗಳಲ್ಲಿ ಏನು ಸುಖವಿರಬಲ್ಲುದು. ಶಾಶ್ವತವಾದ ಬ್ರಹ್ಮಾನಂದವು ಕೇಂದ್ರೀಭೂತವಾಗಿರುವ ಸ್ಥಾನವನ್ನು ನಾವು ಹುಡುಕುತ್ತಿರುವುದು. ಆ ಸ್ಥಾನವು ಭಗವಂತನಲ್ಲಿ ಮಾತ್ರವೇ ನಮಗೆ ದೊರಕುವುದು. ಆದುದರಿಂದ ನಮ್ಮ ಎಲ್ಲಾ ರಾಗಗಳೂ ಭಾವಗಳೂ ಅವನಿಗೇ ಹೋಗಬೇಕು. ಅವು ಇರುವುದು ಅವನಿಗಾಗಿಯೆ. ಯಾಕೆಂದರೆ ಅವು ತಮ್ಮ ತಮ್ಮ ಗುರಿಯನ್ನು ತಪ್ಪಿ ಕೆಳಕ್ಕೆ ಹೋದರೆ, ಅಲ್ಪಗಳಾಗುತ್ತವೆ. ಯಾಕೆಂದರೆ ತಮ್ಮ ಗುರಿಯಾದ ದೇವರನ್ನು ಕುರಿತು ಅವು ಹೋದಾಗ ಅತ್ಯಲ್ಪವೂ ನೀಚವೂ ಆದ ಪ್ರವೃತ್ತಿಗಳು ಕೂಡ ಬದಲಾವಣೆಯನ್ನು ಹೊಂದುತ್ತವೆ. ಆದುದರಿಂದ ಮನುಷ್ಯನ ದೇಹದ ಮತ್ತು ಮನಸ್ಸಿನ ಎಲ್ಲಾ ಶಕ್ತಿಗಳಿಗೂ ಅವು ಯಾವ ರೀತಿಯವೇ ಆಗಲಿ, ದೇವರೇ ಗುರಿ ಏಕಾಯನ. ಆದುದರಿಂದ ಮನುಷ್ಯನ ಹೃದಯದ ಆಶೆಗಳನ್ನೂ ಪ್ರವೃತ್ತಿಗಳನ್ನೂ ದೇವರ ಕಡೆಗೇ ತಿರುಗಿಸಬೇಕು. ನಾವು ಪ್ರೀತಿಸಬೇಕಾದುದು ಅವನೊಬ್ಬನನ್ನು ಮಾತ್ರವೆ. ಸೌಂದರ್ಯ ಮತ್ತು ಗಾಂಭೀರ್ಯಗಳು ಮೂರ್ತಿಮತ್ತಾದವನು ಅವನೆ. ನಮ್ಮ ಹೃದಯಗಳು ಮತ್ತಾರನ್ನು ತಾನೆ ಪ್ರೀತಿಸಬಲ್ಲವು? ಈ ವಿಶ್ವದಲ್ಲಿ ಅವನಿಗಿಂತ ಹೆಚ್ಚು ಸುಂದರರು ಯಾರಿದ್ದಾರೆ? ಪತಿಯಾಗಲು ಅವನಿಗಿಂತ ಹೆಚ್ಚು ಅರ್ಹರಾದವರು ಯಾರಿದ್ದಾರೆ? ನಮ್ಮ ಪ್ರೇಮಕ್ಕೆ ಪಾತ್ರವಾಗಲು ಅವನಿಗಿಂತ ಹೆಚ್ಚು ಅರ್ಹತೆ ಯಾರಿಗೆ ಇದೆ? ಆದುದರಿಂದ ನಾವು ಅವನನ್ನೆ ಪ್ರಿಯನಾದ ಗಂಡನೆಂದು ಒಪ್ಪಿಕೊಳ್ಳೋಣ. ನಾವು ಮೊದಲೇ ಹೇಳಿದಂತೆ, ಈ ಪ್ರೇಮಪ್ರಕಾರವನ್ನು ಒಪ್ಪಿ ಅದನ್ನು ಪ್ರಶಂಸಿಸಿ ಭಕ್ತಿಯಿಂದ ಅನುಸರಿಸುವ ಭಕ್ತನು. ಭಗವಂತನೊಂದಿಗೆ ತನ್ನ ಸಂಬಂಧವನ್ನು ವಿವರಿಸಲು ಮನುಷ್ಯನ ವ್ಯವಹಾರದ ಈ ಭಾಷೆಯೇ ಸಾಕೆಂದು ಒಪ್ಪಿಕೊಳ್ಳುತ್ತಾನೆ; ಮೂರ್ಖರಿಗೆ ಇದು ತಿಳಿದಿಲ್ಲ. ತಿಳಿಯುವುದೂ ಇಲ್ಲ. ಅವರು ಈ ಸಂಬಂಧವನ್ನು ಬರಿಯ ದೇಹದ ದೃಷ್ಟಿಯಿಂದ ಮಾತ್ರ ನೋಡುತ್ತಾರೆ. *

---

* ಸುರತವರ್ಧನಂ ಶೋಕನಾಶನಂ ಸ್ವರಿತವೇಣುನಾ ಸುಷ್ಠು ಚುಂಬಿತಂ
ಇತರರಾಗ ವಿಸ್ಮಾರಣಂ ನೃಣಾಂ ವಿತರ ವೀರನಸ್ತೇಽಧರಾಮೃತಂ
ಭಾಗವತ–ಗೋಪಿಗೀತಾ

"ಹೇ ಪ್ರಿಯ, ಶೋಕನಾಶಕವೂ, ಕೊಳಲಿನಲ್ಲಿ ಅಂತಹ ಮಧುರಸ್ವರ ವನ್ನು ಹೊರಡಿಸುವುದೂ, ಆದ ನಿನ್ನ ಅಧರದ ಒಂದೇ ಒಂದು ಚುಂಬನ ವನ್ನು ನನಗೆ ಕೊಡು. ನಿನ್ನ ಚುಂಬನವನ್ನು ಅನುಭವಿಸಿದವನಿಗೆ ಎಂದೆಂ ದಿಗೂ ನಿನ್ನ ಆಸೆಯೇ ಉಳಿಯುತ್ತದೆ. ಅವನ ದುಃಖಗಳೆಲ್ಲಾ ಶಮನ ವಾಗಿ, ಪ್ರಪಂಚದ ಸಣ್ಣ ಸಣ್ಣ ಪ್ರೇಮಗಳನ್ನೆಲ್ಲಾ ಅವನು ಮರೆಯು ತ್ತಾನೆ" ಮುಂತಾಗಿ ಭಕ್ತನು ಹೇಳುವಾಗ ಮೂರ್ಖರಿಗೆ ಅದರ ಅರ್ಥವೇ ತಿಳಿಯುವುದಿಲ್ಲ. ಭಕ್ತನ ಇಂತಹ ಮಾತುಗಳೆಲ್ಲಾ ದೇಹಕ್ಕೆ ಸಂಬಂಧಪಟ್ಟವೆಂದು ಎಂದಿಗೂ ತಿಳಿಯಕೂಡದು. ಆ ಮಾತುಗಳನ್ನು ಸರಿಯಾಗಿ ತಿಳಿದುಕೊಳ್ಳಬೇಕಾದರೆ ನಾನು ಮನುಷ್ಯನನ್ನು ದೇವರಾಗಿ ಮಾಡುವ ಪ್ರಿಯನ ಆ ಚುಂಬನವನ್ನು ಬಯಸಬೇಕು. ಅಂತಹ ಚುಂಬನ ವನ್ನು ಅನುಭವಿಸಿದವನ ಪಾಲಿಗೆ ಪ್ರಪಂಚವೇ ಬದಲಾವಣೆಯಾಗಿ ಕಾಣುತ್ತದೆ. ಸೂರ್ಯಚಂದ್ರಾದಿ ವಿಶ್ವವೆಲ್ಲಾ ಪ್ರೇಮಸಾಗರದಲ್ಲಿ ಕರಗಿ ಸೇರುತ್ತದೆ. ಅದನ್ನು ನಾವು ನಿಜವಾಗಿಯೂ ಹುಚ್ಚು ಪ್ರೇಮದ ಪೂರ್ಣತ್ವವೆಂದು ಕರೆಯಬಹುದು. ಆದರೆ ನೈಜವಾದ ಆತ್ಮ ಪ್ರೇಮಿಯು ಅಲ್ಲಿಗೂ ಸುಮ್ಮನಿರುವುದಿಲ್ಲ. ಪತಿ ಪತ್ನಿಯರ ಪ್ರೇಮವೂ ಕೂಡ ಅವನಿಗೆ ಸಾಕಷ್ಟು ಹುಚ್ಚಲ್ಲ. ಆದುದರಿಂದ ಅವನು ಉಪಪತ್ನಿಯ ಸ್ಥಾನದ ಪ್ರೇಮವನ್ನು ಅವಲಂಬಿಸುತ್ತಾನೆ. ಪ್ರೇಮವು ಅಲ್ಲಿ ಇನ್ನೂ ತೀವ್ರವಾಗಿ ಇರುತ್ತದೆ. ಯಾಕೆಂದರೆ ಹೆಚ್ಚು ಹೆಚ್ಚು ಪ್ರತಿ ಬಂಧಕಗಳು ಬಂದಂತೆ ಹೆಚ್ಚು ಹೆಚ್ಚು ಬಲವಾಗಿ ಬೆಳೆಯುವುದು ಆ ಪ್ರೇಮದ ಸ್ವಭಾವ. ಪತಿ ಪತ್ನಿಯರಿಗೆ ಇರುವ ಪ್ರೇಮವು ಸುಗಮವಾ ದುದು. ದಾರಿಯಲ್ಲಿ ಹೆಚ್ಚು ತಡೆಗಳಿಲ್ಲ. ಆದುದರಿಂದ ಭಕ್ತನು ಪತಿ ಪತ್ನಿಯರ ಪ್ರೇಮವು ಬಹಳ ನೀರಾಗವಾದುದೆಂದು ಅದನ್ನು ಬಿಟ್ಟು, ತಂದೆ ತಾಯಿಗಳೂ ಗಂಡನೂ, ತನ್ನ ಇತರ ಬಂಧುಗಳೂ ಅಡ್ಡ ಬಂದರೂ ಕೇಳದೆ ತನಗೆ ಪ್ರಿಯನಾದವನನ್ನು ದಿನದಿನಕ್ಕೂ ಹೆಚ್ಚು ಹೆಚ್ಚಾಗಿ ಪ್ರೀತಿ ಸುವ ಹುಡುಗಿಯಂತೆ, ಗಂಡನನ್ನು ಬಿಟ್ಟು ಬೇರೆ ಒಬ್ಬನನ್ನು ಪ್ರೀತಿ ಸುವವಳ ಮನೋಭಾವನನ್ನು ಹೊಂದುತ್ತಾನೆ. ಭಾಗವತದ ಕರ್ತೃವು,

ಗೋಪಿಯರು, ಶ್ರೀಕೃಷ್ಣನು ಪರಮಾತ್ಮನ ಅವತಾರವೆ ಎಂಬುದಾಗಿ ಸಾತ್ವಿಕ ಪ್ರೇಮದಿಂದ ತಿಳಿದು ಅವನಲ್ಲೇ ಅನುರಕ್ತರಾದ ವಿಷಯವನ್ನು ವಿವರಿಸಿದ್ದಾನೆ. ಬೃಂದಾವನದ ಉಪವನದಲ್ಲಿ ಗೋಪಿಯರು ಕೃಷ್ಣನನ್ನು ಎಷ್ಟು ಹುಚ್ಚಿನಿಂದ ಪ್ರೀತಿಸರೆಂಬುದನ್ನೂ, ಅವನ ಮಧುರವಾದ ಧ್ವನಿಯನ್ನು ಕೇಳಿದ ಕೂಡಲೆ ಅವರು ಹೇಗೆ ಈ ಜಗತ್ತನ್ನೂ, ಇದರ ಸುಖ ದುಃಖವೇ ಮುಂತಾದ ಇತರ ಬಂಧನಗಳನ್ನೂ ತೊರೆದು ಅವನನ್ನು ಕಾಣಲು ಓಡಿದರೆಂಬುದನ್ನೂ ಮನುಷ್ಯನ ಮಾತು ಬಣ್ಣಿಸಲಾರದು !

ಮನುಜ; ಓ ಮನುಜನೆ, ನೀನು ದೈವೀ ಪ್ರೇಮವನ್ನು ಹೇಳುತ್ತಿರುವೆ. ಜತೆಯಲ್ಲಿ ಜಗತ್ತಿನ ಎಲ್ಲಾ ಅಲ್ಪ ಪ್ರತಿಷ್ಠೆಗಳಲ್ಲೂ ಭಾಗಿಗಳಾಗುತ್ತಿರುವೆ. ನಿನಗೆ ನಿಜವಾಗಿಯೂ ಮನಶ್ಶುದ್ಧಿಯಿರುವುದೆ? "ರಾಮನು ಇರುವ ಕಡೆ, ಇತರ ಆಸೆಗಳಿಗೆ ಸ್ಥಳವಿಲ್ಲ. ಆಸೆಗಳಿರುವ ಕಡೆ ರಾಮನಿಗೆ ಸ್ಥಳವಿಲ್ಲ.* ಅವು ಎರಡೂ ಕೂಡ ಕತ್ತಲೆ ಬೆಳಕುಗಳಂತೆ ಒಟ್ಟಿಗೆ ಎಂದಿಗೂ ಇರಲಾರವು."

---

* ಜಹಾ ರಾಮ್ ಕಹಾ ರಾಮ್ ನಹೀ
ಜಹಾ ಕಾಮ್ ಕಹಾ ನಹೀ ರಾಮ್
ದೊನೋ ಏಕ್ ಸಾತ್ ಮಿಲತ್ ನಹೀ
ರವಿರಜನೀ ಏಕ್ ಠಾಮ್

—ತುಲಸೀದಾಸ್

# ೨೦ ಉಪಸಂಹಾರ

ಪ್ರೇಮದ ಆ ಅತ್ಯುಚ್ಚವಾದ ಆದರ್ಶವು ಸಿದ್ಧಿಸಿದಾಗ ತತ್ವಗಳನ್ನೆಲ್ಲಾ ಆಚೆಗೆ ತಳ್ಳುವುದೆ. ಆಗ ಅವು ಯಾರಿಗೆ ತಾನೆ ಬೇಕಾಗುತ್ತವೆ? ಮುಕ್ತಿ ನಿರ್ವಾಣ ಸ್ವಾತಂತ್ರ್ಯ ಇವುಗಳೆಲ್ಲಾ ಆಗ ಅಲ್ಪವಾದುವುಗಳು. ಅವುಗಳನ್ನು ಆಚೆಗೆ ಎಸೆಯಬಹುದು. ಯಾಕೆಂದರೆ ಅಂತಹ ದೈವಿಕವಾದ ಪ್ರೇಮದ ಆನಂದದ ಅನುಭವದಲ್ಲಿರುವಾಗ ಯಾರಿಗೆ ತಾನೆ ಮುಕ್ತಿಯು ಬೇಕಾದೀತು. "ಪ್ರಭು ನನಗೆ ಐಶ್ವರ್ಯ ಬೇಡ, ಸ್ನೇಹಿತರು ಬೇಡ. ಸುಂದರಿಯರೂ ಕವಿತೆಯೂ ಸ್ವಾತಂತ್ರ್ಯವೂ ಬೇಡ. ಜನ್ಮ ಜನ್ಮದಲ್ಲೂ ಸ್ವಾಭಾವಿಕವಾಗಿ ನಿನ್ನಲ್ಲಿ ನನ್ನ ಭಕ್ತಿಯಿರಲಿ." ಹೌದು ನೀನು ಯಾವಾಗಲೂ ನನ್ನ ಪ್ರಿಯನೇ ಆಗಿರು. ಅಷ್ಟಾದ ಮೇಲೆ ನಮಗೆ ಮತ್ತೇನು ತಾನೆ ಬೇಕು. ಭಕ್ತನು ಹೇಳುತ್ತಾನೆ "ಸಕ್ಕರೆಯಾಗುವುದು ಯಾರಿಗೆ ಬೇಕಾಗಿದೆ. ಸಕ್ಕರೆಯ ರುಚಿ ನೋಡುವುದು ನನಗೆ ಬೇಕಾಗಿದೆ. ಭಗವಂತನ ಮಾಧುರ್ಯವನ್ನು ನಾನು ಸವಿಯಬೇಕಾಗಿದೆ. ಭಗವಂತನೊಡನೆ ಒಂದಾಗಿ ಬಂಧನಮುಕ್ತರಾಗಲು ಯಾರಿಗೆ ತಾನೆ ಆಸೆ? ಅವನೇ ನಾನು ಎಂಬುದು ನನ್ನ ಅನುಭವಕ್ಕೆ ಬಂದಿರಬಹುದು. ಆದರೂ ಪ್ರಿಯನಿಂದ ದೊರಕುವ ಸುಖಕ್ಕಾಗಿ ನಾನು ಬೇರೆಯಾಗುತ್ತೇನೆ ಎಂದು ಭಕ್ತನು ಹೇಳುತ್ತಾನೆ. ಪ್ರೇಮಕ್ಕಾಗಿ ಪ್ರೇಮವೆಂಬುದು ಅವನ ಹೆಚ್ಚಾದ ಆಸೆ. ಆ ಪ್ರೇಮವನ್ನು ಸವಿಯಲು ಭಕ್ತನು ಸಾವಿರಾರು ಸಲ ದೇಹವನ್ನೂ ಮನಸ್ಸನ್ನೂ ಬಂಧನದಲ್ಲಿರಿಸಲು ಸಿದ್ಧನಾಗಿದ್ದಾನೆ. ಆದುದರಿಂದ ಭಕ್ತನು ಪ್ರೀತಿಸುವುದಕ್ಕೂ ಪ್ರೀತಿಯನ್ನು ಪ್ರತಿಯಾಗಿ ಹೊಂದುವುದಕ್ಕೂ ಹೊರತು ಮತ್ತಾವುದಕ್ಕೂ ಲಕ್ಷ್ಯಮಾಡುವುದಿಲ್ಲ. ಅವನ ಅಪ್ರಾಪಂಚಿಕವಾದ ಪ್ರೇಮವು ನದಿಯ ಪ್ರವಾಹಕ್ಕೆ ಎದುರಾಗಿ ಪ್ರವಹಿಸುವ ಅಲೆಗಳಂತೆ. ಜನರು ಅವನನ್ನು ಹುಚ್ಚನೆಂದು ಕರೆಯುತ್ತಾರೆ. ಅಂತವನೊಬ್ಬನನ್ನು ನಾನು ಬಲ್ಲೆ. ಪ್ರಪಂಚವು ಅವನನ್ನು ಹುಚ್ಚನೆಂದು ಕರೆದಾಗ ಅವನು ಈ ಉತ್ತರವನ್ನು ಕೊಟ್ಟನು:—"ಮಿತ್ರರೇ

ಈ ಪ್ರಪಂಚವೇ ಒಂದು ಹುಚ್ಚಾಸ್ಪತ್ರೆ. ಇಲ್ಲಿ ಕೆಲವರಿಗೆ ಸ್ತ್ರೀಯರಲ್ಲಿ ಪ್ರೇಮದ ಹುಚ್ಚು. ಕೆಲವರಿಗೆ ಹೆಸರು ಪ್ರಸಿದ್ಧಿ ಇವುಗಳ ಹುಚ್ಚು. ಕೆಲವರಿಗೆ ಹಣದ ಹುಚ್ಚು. ಕೆಲವರಿಗೆ ಮೋಕ್ಷದ ಅಥವ ಸ್ವರ್ಗದ ಹುಚ್ಚು. ಈ ವಿಸ್ತಾರವಾದ ಆಸ್ಪತ್ರೆಯಲ್ಲಿ ನಾನೂ ಹುಚ್ಚನೆ. ನನಗೆ ದೇವರ ಹುಚ್ಚು. ನೀವು ಹುಚ್ಚರು. ನಾನೂ ಹುಚ್ಚ. ಆದರೂ ನಿಮ್ಮ ಎಲ್ಲಾ ಹುಚ್ಚುಗಳಿಗಿಂತಲೂ ನನ್ನ ಹುಚ್ಚೆ ಉತ್ತಮವಾದುದು.'' ನಿಜವಾದ ಭಕ್ತನ ಪ್ರೇಮವು ಇಂತಹ ಉರಿಯುವ ಹುಚ್ಚು. ಅದರ ಎದುರಿಗೆ ಪ್ರಪಂಚದ ಎಲ್ಲಾ ಆಸೆಗಳೂ ಅವನ ಕಣ್ಣಿನಿಂದ ಮರೆಯಾಗುತ್ತವೆ. ಪ್ರಪಂಚವೆಲ್ಲಾ ಅವನ ಪಾಲಿಗೆ ಪ್ರೇಮದಿಂದ ಮಾತ್ರವೇ ತುಂಬಿರುತ್ತದೆ. ನೈಜ ಪ್ರೇಮವುಳ್ಳವನಿಗೆ ತೋರುವುದೇ ಹೀಗೆ. ಒಬ್ಬ ಮನುಷ್ಯನಲ್ಲಿ ಯಾವಾಗ ಈ ಬಗೆಯ ಪ್ರೇಮವುಂಟಾಗುವುದೋ ಅಂದಿನಿಂದ ಅವನು ಶಾಶ್ವತವಾದ ಸುಖವನ್ನೂ ಆನಂದವನ್ನೂ ಹೊಂದುತ್ತಾನೆ. ಪ್ರಪಂಚದ ಅಲ್ಪ ವಸ್ತುಗಳಿಗಾಗಿ ಯಾವಾಗಲೂ ನಮ್ಮಲ್ಲಿರುವ ಆಸೆಯೆಂಬ ರೋಗವನ್ನು ಈ ದೈವಿಕ ಪ್ರೇಮವೆಂಬ ಹುಚ್ಚು ಮಾತ್ರವೇ ಗುಣಪಡಿಸಬಲ್ಲದು.

ಪ್ರೇಮದ ಧರ್ಮದಲ್ಲಿ, ನಾವೆಲ್ಲ ದ್ವೈತಿಗಳಾಗಿಯೆ ಪ್ರಾರಂಭಿಸಬೇಕು. ಆಗ ದೇವರೇ ಒಬ್ಬ ವ್ಯಕ್ತಿ. ನಾವುಗಳೇ ಬೇರೆ ಬೇರೆ ವ್ಯಕ್ತಿಗಳಾಗುತ್ತೇವೆ. ಈಗ ಮಧ್ಯೆ ಪ್ರೇಮವು ಬರುತ್ತದೆ. ಮನುಷ್ಯನು ದೇವರ ಸಮೀಪಕ್ಕೆ ಬರಲು ಪ್ರಾರಂಭಿಸುತ್ತಾನೆ. ದೇವರೂ ಮನುಷ್ಯನ ಹತ್ತಿರ ಹತ್ತಿರಕ್ಕೆ ಬರುತ್ತಾನೆ. ಮನುಷ್ಯನು ತಂದೆ, ತಾಯಿ, ಮಗ, ಮಿತ್ರ, ಯಜಮಾನ, ಪ್ರಿಯ ಮುಂತಾದ ಸಂಬಂಧಗಳನ್ನೆಲ್ಲಾ ಕಲ್ಪಿಸಿಕೊಂಡು ಅವರ ಮೂಲಕ ತನ್ನ ಪ್ರೇಮವನ್ನು ವಿಸ್ತರಿಸುತ್ತಾನೆ. ದೇವರೇ ಅವನಿಗೆ ಇವರೆಲ್ಲಾ ಆಗುತ್ತಾನೆ. ಕೊನೆಯಲ್ಲಿ ತಾನು ಪೂಜಿಸುವ ಭಗವಂತನಲ್ಲಿ ಅವನು ಪೂರ್ಣವಾಗಿ ಐಕ್ಯವಾದಾಗ ಈ ಪ್ರೇಮದ ವಿಸ್ತಾರದ ಕಡೆಯ ಮೆಟ್ಟಲು ಅವನಿಗೆ ಸಿಕ್ಕುತ್ತದೆ. ಹೀಗೆ ನಾವು ಮೊದಲು ಸ್ವಾರ್ಥದಿಂದಲೇ,

ನಮ್ಮಲ್ಲಿ ಪ್ರೇಮದಿಂದಲೆ ಪ್ರಾರಂಭಿಸುತ್ತೇವೆ. ಅಥವಾ ಇತರ ಮಾತು ಗಳಲ್ಲಿ ಹೇಳಬೇಕಾದರೆ ಸ್ವಾರ್ಥದ ಆಸೆಗಳಿಂದ ಪ್ರೇಮವೂ ಕೂಡ ಮೊದಲು ಮೊದಲು ನಮ್ಮ ಅಲ್ಪ ಜೀವಗಳ ತುಷ್ಟಿಗಳಿಗಾಗಿಯೇ ಎಂದು ತೋರು ತ್ತದೆ. ಆದರೆ ಕೊನೆಯಲ್ಲಿ ಭಗವಂತನ ಅಪಾರವಾದ ಪ್ರೇಮದಲ್ಲಿ ಐಕ್ಯ ವಾಗಿ ಜಾಜ್ವಲ್ಯಮಾನವಾಗಿ ಪ್ರಕಾಶಿಸುವ ಪ್ರೇಮದ ಜ್ವಾಲೆಯು ಉಂಟಾಗುತ್ತದೆ. ಪ್ರೇಮದ ಬೆಳಕಿನ ಎದುರಿಗೆ ಮನುಷ್ಯನು ಆಶ್ಚರ್ಯಕರ ವಾದ ಬದಲಾವಣೆಯನ್ನು ಹೊಂದುತ್ತಾನೆ. ಅವನ ಹೃದಯದಲ್ಲಿ ತುಂಬಿ ರುವ ಕೊಳಕೂ, ಅಲ್ಪವಾದ ಆಸೆಗಳೂ ಅವನನ್ನು ಬಿಡುತ್ತವೆ. ಕೊನೆ ಯಲ್ಲಿ ಅವನಿಗೆ ಪ್ರೇಮ, ಪ್ರಿಯ, ಭಕ್ತ ಇವೆಲ್ಲಾ ಒಂದೇ ಎಂಬ ಸ್ಫೂರ್ತಿ ದಾಯಕವಾದ ಸುಂದರವಾದ ಸತ್ಯದ ಅನುಭವವುಂಟಾಗುತ್ತದೆ.

— ಓಂ —

